# ನಮ್ಮ ಮಾನಸ

ಜನವರಿ 2008

ಸಂಪುಟ : 1 ಸಂಚಿಕೆ : 9

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*✆ : 26757159 / 32715773*



*ಚಂದಾ ವಿವರ*
ಬಿಡಿಪ್ರತಿ 8–00 ರೂ.
100–00 ರೂ.

## ಪರಿವಿಡಿ



ನಮ್ಮ ಮ

114/5, 9ನೇ ತಿರುವು, 2ನೇ ಮುಖ್ಯರ
560

*ಚಂದಾಹಣವನ್ನು ಈ*
*ಡಿ.ಡಿ. ಮೂಲ*

–

*ಮೈಸೂರಿನಲ್ಲಿ ಓದು*
*ಚಂದಾ ನವಿ*
ವೆಂ

*2329, 12ನೇ ಮೈನ*



ಸಂಪಾದಕೀಯ

## ಇದು ವ್ಯವಸ್ಥೆಗೆ ಬಹುದೊಡ್ಡ ಸಮಸ್ಯೆಯಾಗಿ ಕಾಡುತ್ತಿಲ್ಲವೇಕೆ ?

ನವೆಂಬರ್ 14ನ್ನು ಮಕ್ಕಳ ದಿನಾಚರಣೆಯಾಗಿ, ನವೆಂಬರ್ 19ನ್ನು ಅಂತರರಾಷ್ಟ್ರೀಯ ಮಕ್ಕಳ ಹಕ್ಕುಗಳ ದಿನವೆಂದು ಸಂಭ್ರಮದಿಂದ, ಸಾಂಪ್ರದಾಯಿಕವಾಗಿ, ಅರ್ಥಹೀನವಾಗಿ ಆಚರಿಸುವ ನಾವು ದಿನನಿತ್ಯ ಮಕ್ಕಳ ಮೇಲೆ ನಡೆಯುವ ಲೈಂಗಿಕ ದೌರ್ಜನ್ಯ, ಕಿರುಕುಳಗಳನ್ನು ಒಂದು ಬೃಹದಾಕಾರದ ಸಮಸ್ಯೆ ಎಂದು ಪರಿಗಣಿಸುತ್ತಲೇ ಇಲ್ಲ. ಭಾರತದಲ್ಲಿ 375 ಮಿಲಿಯನ್‌ಗಿಂತ ಹೆಚ್ಚು ಮಕ್ಕಳಿದ್ದಾರೆ. ಅಂದರೆ ಇಡಿಯ ಜನಸಂಖ್ಯೆಯ 40% ಮಕ್ಕಳು ಇದ್ದಾರೆ.

ಹುಟ್ಟಿದ ಮಗುವಿನಿಂದ 16 ವರುಷದವರೆಗಿನವರನ್ನು ಭಾರತದಲ್ಲಿ ಮಕ್ಕಳು ಎಂದು ಗುರುತಿಸಲಾಗಿದೆ. ಪ್ರತಿನಿತ್ಯ ಮಾಧ್ಯಮದಲ್ಲಿ 1 ತಿಂಗಳ ಮಗುವಿನಿಂದ 16 ವರ್ಷದ ಅನೇಕ ಮಕ್ಕಳು, ವಿಶೇಷವಾಗಿ ಹೆಣ್ಣುಮಕ್ಕಳು ಲೈಂಗಿಕ ಕಿರುಕುಳಗಳಿಗೆ ಒಳಗಾಗುವುದನ್ನು ನಾವು ಓದುತ್ತಿದ್ದೇವೆ, ಕೇಳುತ್ತಿದ್ದೇವೆ. ಶಾಲೆಯಲ್ಲಿ ಉಪಾಧ್ಯಾಯರು ತಮ್ಮ ಗುಪ್ತಾಂಗಗಳನ್ನು, ಎದೆಯಭಾಗವನ್ನು ಮುಟ್ಟುತ್ತಾರೆ ಎಂಬುದನ್ನು ಹೇಳಿದರೆ ಅವರ ಕೋಪಕ್ಕೆ ತುತ್ತಾಗಬೇಕೆಂಬ ಹೆದರಿಕೆಯಿಂದ ಹೇಳಲಾಗದೆ, ಅನುಭವಿಸಲಾಗದೇ ಒದ್ದಾಡುವ ಹೆಣ್ಣುಮಕ್ಕಳು ನಮ್ಮಲ್ಲಿದ್ದಾರೆ. ಹೊಸ ದೆಹಲಿಯಲ್ಲಿ ಇಂತಹ ಪ್ರಕರಣವನ್ನು ಬೆಳಕಿಗೆ ತಂದ 16 ವರುಷದ ಹುಡುಗಿ ಶಾಲೆಯನ್ನೇ ಬಿಡಬೇಕಾಗಿ ಬಂತು. ತಂದೆಯೇ 14, 15 ವರ್ಷದ ಮಗಳ ಮೇಲೆ ಅತ್ಯಾಚಾರವೆಸಗಿ ಆಕೆ ಗರ್ಭಿಣಿಯಾದ ಪ್ರಸಂಗಗಳು ನಮ್ಮ ಮುಂದಿವೆ. 8 ತಿಂಗಳ ಕೂಸಿನ ಮೇಲೆ, ನಾಲ್ಕು-ಐದು ವರ್ಷದ ಹೆಣ್ಣುಮಕ್ಕಳ ಮೇಲೆ ಹೀಗೆ ಲೈಂಗಿಕ ಕಿರುಕುಳ, ಶೋಷಣೆ ಅವಿರತವಾಗಿ ನಡೆಯುತ್ತಲೇ ಇದೆ. ಇದು ನಡೆಯುವುದು-ತಂದೆ, ಮಲತಂದೆ, ಅಣ್ಣ-ತಮ್ಮಂದಿರು, ಅವರ ಗೆಳೆಯರು, ಬಂಧುಗಳು, ಉಪಾಧ್ಯಾಯರು, ಪಕ್ಕದ ಮನೆಯವರು, ಪರಿಚಿತರಿಂದಲೇ. ದೌರ್ಜನ್ಯ ನಡೆಸುವವರು ಎಲ್ಲಾ ದೇಶ, ಸಂಸ್ಕೃತಿ, ಧರ್ಮಗಳಲ್ಲೂ ಕಂಡುಬರುತ್ತಾರೆ.

ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಯುನಿಸೆಫ್ ಮತ್ತು 'ಮಕ್ಕಳನ್ನು ರಕ್ಷಿಸಿ' ಸಂಸ್ಥೆಯವರು ಹೊರತಂದ '13 State National Study on Child Sexual Abuse' ಅಧ್ಯಯನದ ವರದಿಯ ಪ್ರಕಾರ ಈ ದೇಶದ ಒಟ್ಟು ಮಕ್ಕಳ ಸಂಖ್ಯೆಯ ಅರ್ಧದಷ್ಟು ಮಕ್ಕಳಿಗೆ ಲೈಂಗಿಕ ಕಿರುಕುಳ ದಿನನಿತ್ಯದ ನರಕವಾಗಿದೆ. ಆದರೆ ಕತ್ತಲಲ್ಲಿ, ಗುಟ್ಟಿನಲ್ಲಿ ಹೋತುಹೋಗುತ್ತಿದ್ದ ಸತ್ಯ ಈಗ ಬೆಳಕಿಗೆ ಬರತೊಡಗಿದೆ. ನಾಚಿಕೆಯಿಂದ, ಭಯದಿಂದಾಗಿ, ಕುಟುಂಬದ ಮರ್ಯಾದೆಗಾಗಿ ಈಗಲೂ ಸಹ ಇಂತಹ ಅನೇಕ ಘಟನೆಗಳು ವರದಿಯಾಗದಿರುವುದೂ ಕೂಡ ಕಂಡುಬರುತ್ತದೆ.

ಮಕ್ಕಳ ಮೇಲೆ ಲೈಂಗಿಕ ದೌರ್ಜನ್ಯಗಳು ಹಲವಾರು ಬಗೆಯಲ್ಲಿ ನಡೆಯುತ್ತಿವೆ. ಅಸಭ್ಯ ಚಿತ್ರಗಳ ಪ್ರದರ್ಶನ, ಅಂಗಾಂಗಗಳ ಪ್ರದರ್ಶನ, ಅಸಭ್ಯ ಭಾಷೆ, ಗುಪ್ತಾಂಗಗಳನ್ನು ಮುಟ್ಟುವುದು, ಎದೆ ಸವರುವುದು, ಮುದ್ದಿಸುವುದು, ಲೈಂಗಿಕಭಾಷೆ ಬಳಸಿ ಬಯ್ಯುವುದು, ಅತ್ಯಾಚಾರ, ಸನ್ನೆ ಮಾಡುವುದು.... ಹೀಗೆ ದೈಹಿಕವಾಗಿ, ಮಾನಸಿಕವಾಗಿ ಹೆಣ್ಣುಮಕ್ಕಳಿಗೆ ಕಿರುಕುಳ ನೀಡಲಾಗುತ್ತಿದೆ.

ಪ್ರವಾಸೋದ್ಯಮದ ಜೊತೆಗೆ ಲೈಂಗಿಕ ಕಿರುಕುಳ, ದೌರ್ಜನ್ಯ ತಳಕು ಹಾಕಿಕೊಂಡು ಹದಿಹರೆಯದ ಹೆಣ್ಣುಮಕ್ಕಳು ಇದಕ್ಕೆ ಬಲಿಯಾಗುತ್ತಿದ್ದಾರೆ. ಗೋವಾದಲ್ಲಿ ಈ ಬಗ್ಗೆ ಅನೇಕ ಪ್ರಕರಣಗಳು ನ್ಯಾಯಾಲಯದಲ್ಲಿ ದಾಖಲಾಗಿವೆ. ವಿದೇಶಿ ಪ್ರಯಾಣಿಕರು ಬೆಲೆಬಾಳುವ ಉಡುಗೊರೆ ಹಾಗೂ ಹಣದಿಂದ ಮಕ್ಕಳನ್ನು ಆಕರ್ಷಿಸುತ್ತಾರೆ. ಗೋವಾದಲ್ಲಿ 9 ವರ್ಷದ ಹುಡುಗಿ 56 ವರ್ಷದ ಇಟಾಲಿಯನ್ ಪ್ರವಾಸಿಗನಿಂದ ಅತ್ಯಾಚಾರಕ್ಕೆ ಒಳಗಾಗಿದ್ದಳು. ಈ ರೀತಿ ಲೈಂಗಿಕ ಕಿರುಕುಳ, ಅತ್ಯಾಚಾರಕ್ಕೆ ಒಳಗಾಗುತ್ತಿರುವ ಹದಿಹರೆಯದ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಾಗುತ್ತಿದ್ದ ಹಾಗೆ ಗೋವಾದಲ್ಲಿ ಮಾದರಿ ಕಾನೂನೊಂದನ್ನು ರೂಪಿಸಲು ಪ್ರಯತ್ನಿಸಲಾಗಿದೆ. 2003ರಲ್ಲಿ 'ದಿ ಗೋವಾ ಚಿಲ್ಡ್ರನ್ ಆ್ಯಕ್ಟ್'ನ್ನು ಜಾರಿಗೆ ತರಲಾಯಿತು. ಇದರ ಪ್ರಕಾರ ಲೈಂಗಿಕ ಕಿರುಕುಳ ಜಾಮೀನು ಸಿಗದಂತಹ ಅಪರಾಧವಾಗಿದೆ. ಕಠಿಣವಾದ ದಂಡ, ಜೈಲು ಶಿಕ್ಷೆಯನ್ನು ಇಲ್ಲಿ ವಿಧಿಸಲಾಗಿದೆ. ಇಲ್ಲಿ ಮಕ್ಕಳಿಗೆ ಅನುಕೂಲವಾಗುವಂತೆ 'Child Friendly' ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ (Child Friendly Court). ಇದು ಪ್ರವಾಸೋದ್ಯಮಕ್ಕೆ ಸಂಬಂಧ ಪಟ್ಟದ್ದರಿಂದ ಹೊಟೇಲ್ ಮಾಲೀಕರು, ಫೋಟೋ ಸ್ಟುಡಿಯೋ, ಸೈಬರ್ ಕೆಫೆಯ ಯಜಮಾನರು, ಪೊಲೀಸರು – ಹೀಗೆ ಎಲ್ಲಾ ಸಾರ್ವಜನಿಕರ ಮೇಲೆ ಹದಿಯರೆಯದ ಹೆಣ್ಣುಮಕ್ಕಳು ಲೈಂಗಿಕ ದೌರ್ಜನ್ಯಕ್ಕೆ ಒಳಗಾಗದಂತೆ ನೋಡಿಕೊಳ್ಳುವ ಹೊಣೆಗಾರಿಕೆಯನ್ನು ವಹಿಸಲಾಗಿದೆ. ಅಂದರೆ ಈ ಬಗ್ಗೆ ಜಾಗೃತವಾಗಿರುವುದು, ಕಣ್ಣು

ತೆರೆದಿರುವುದು, ಪೊಲೀಸರಿಗೆ ಮಾಹಿತಿ ನೀಡುವುದು ಇತ್ಯಾದಿ. ಈ ಕಾನೂನಿನ ಬಗ್ಗೆ ಹಲವಾರು ಟೀಕೆಗಳಿದ್ದರೂ ಈ ಕಾನೂನಿನಡಿ ಹಲವಾರು ಪ್ರಕರಣಗಳು ದಾಖಲಾಗಿರುವುದು ಕಂಡುಬರುತ್ತದೆ.

ಮಕ್ಕಳ ಮೇಲೆ ಎಸಗುವ ಲೈಂಗಿಕ ದೌರ್ಜನ್ಯಕ್ಕೆ ಭಾರತದ ನ್ಯಾಯಾಲಯಗಳಲ್ಲಿ ಸಿಗುವ ಶಿಕ್ಷೆಯ ಪ್ರಮಾಣ ಕಡಿಮೆಯೇ. ಜೊತೆಗೆ ಮಕ್ಕಳ ಮೇಲೆ ನಡೆಯುವ ದೌರ್ಜನ್ಯಕ್ಕೆಂದೇ ಸಂಬಂಧಪಟ್ಟ ನಿರ್ದಿಷ್ಟ ಕಾನೂನುಗಳು ನಮ್ಮಲ್ಲಿ ಇಲ್ಲ. ಮಹಿಳೆಯರಿಗೆ ಸಂಬಂಧಿಸಿದ ಕಾನೂನಿನ ಅಡಿಯೇ ಮಕ್ಕಳ ಮೇಲೆ ನಡೆದ ಅತ್ಯಾಚಾರವನ್ನೂ ಅನ್ವಯಿಸಲಾಗುತ್ತದೆ. 'Sexual Molestation Laws', 'Violation of women's, modesty, ಇವುಗಳ ಕೆಳಗೇ ಸಂಭೋಗದ ಹೊರತಾದ ಲೈಂಗಿಕ ಕಿರುಕುಳಗಳನ್ನೂ ತೀರ್ಮಾನಿಸಲಾಗುತ್ತದೆ. ಅಂದರೆ ಇವು ಜಾಮೀನು ಪಡೆಯಬಹುದಾದ ಅಪರಾಧಗಳು. 2 ವರ್ಷದ ಜೈಲು, ಕೆಲವು ಸಾವಿರ ರೂಪಾಯಿಯ ದಂಡ ಅಷ್ಟೇ. ಇಲ್ಲಿ ಲೈಂಗಿಕ ಕಿರುಕುಳದ ವ್ಯಾಖ್ಯಾನವೂ ಕಷ್ಟವಾಗುತ್ತದೆ. ಇವುಗಳನ್ನು 'ಅಸಾಮಾನ್ಯ ಲೈಂಗಿಕ ಅಪರಾಧಗಳು' ಎಂದು ಹೇಳಲಾಗುವುದರಿಂದ ಲೈಂಗಿಕ ಹಿಂಸೆಗೊಳಗಾದ ಮಕ್ಕಳಿಗೆ ನ್ಯಾಯ ದೊರಕಿಸುವುದು ಕಷ್ಟವಾಗುತ್ತದೆ. ಹಾಗಾಗಿ ಇಂತಹ ಮಕ್ಕಳು ಮಾನಸಿಕವಾಗಿ, ದೈಹಿಕವಾಗಿ ಛಿದ್ರರಾಗುವ ಸಾಧ್ಯತೆಗಳು ಹೆಚ್ಚು. ಈ ಖಿನ್ನತೆಯಲ್ಲಿ ಹೆಣ್ಣುಮಕ್ಕಳ ಮುಂದಿನ ಲೈಂಗಿಕ ಜೀವನದ ಮೇಲೆ ವ್ಯತಿರಿಕ್ತವಾದ ಪರಿಣಾಮಗಳು ಉಂಟಾಗುತ್ತವೆ. ಆತ್ಮಹತ್ಯೆಯ ಪ್ರಯತ್ನ, ಡ್ರಗ್ ಅಡಿಕ್ಟ್ ಆಗುವಂತಹ ಸಂಭವಗಳೂ ಇವೆ.

ಹಾಗಿದ್ದರೆ ಪರಿಹಾರ ಏನು? ಕಾನೂನುಗಳನ್ನು ಬದಲಾಯಿಸಿ ಮಕ್ಕಳಿಗೆ ಅನುಕೂಲವಾಗುವಂತಹ ನಿರ್ದಿಷ್ಟ ಕಾನೂನುಗಳನ್ನು ಜಾರಿಗೆ ತರುವಂತೆ ಒತ್ತಾಯಿಸುತ್ತಲೇ ಮಕ್ಕಳಲ್ಲಿ, ಪೋಷಕರಲ್ಲಿ, ನಾಗರೀಕರಲ್ಲಿ ಜಾಗೃತಿ ಮೂಡಿಸಬೇಕಾಗುತ್ತದೆ.

- ಲೈಂಗಿಕ ಕಿರುಕುಳದ ಬಗ್ಗೆ ಅವರಲ್ಲಿ ಜಾಗೃತಿ ಮೂಡಿಸಿ, ಇಂತಹ ಅನುಭವಗಳಿದ್ದರೆ ಹಂಚಿಕೊಳ್ಳುವಂತೆ, ಮೌನಮುರಿದು ಮಾತನಾಡುವಂತೆ ಪ್ರೋತ್ಸಾಹಿಸುವುದು.
- ಲೈಂಗಿಕ ದೌರ್ಜನ್ಯದ ಬಗ್ಗೆ ಜಾಗೃತಿ ಮೂಡಿಸಲು ಒಳ್ಳೆಯ ಹಾಗೂ ಕೆಟ್ಟ 'Touch' ಬಗ್ಗೆ ಎಚ್ಚರಿಕೆಯಿಂದಿರುವಂತೆ ತಿಳಿಸುವುದು.
- ಮಕ್ಕಳು ತಮ್ಮ ಸಹಪಾಠಿಗಳಿಂದ, ಶೋಷಿತರಿಂದ, ಬಯ್ಯುವವರಿಂದ ಪ್ರಭಾವಿತರಾಗಿ ಅಥವಾ ಭಯಭೀತರಾಗಿ ಮಾಡುವ impulsive ನಿರ್ಧಾರಗಳ ಬಗ್ಗೆ ಎಚ್ಚರಿಕೆ ವಹಿಸುವಂತೆ ಮಾಡುವುದು.
- ಲೈಂಗಿಕ ಶಿಕ್ಷಣ ನೀಡುವುದು.

16 ವರ್ಷದ ಕೆಳಗಿನ ಮಗು ಪ್ರತಿ 155 ನಿಮಿಷಕ್ಕೊಮ್ಮೆ ಅತ್ಯಾಚಾರಕ್ಕೊಳಗಾಗುವುದು, 10 ವರ್ಷದ ಕೆಳಗಿನ ಹೆಣ್ಣು ಮಗು ಪ್ರತಿ 13 ಘಂಟೆಗಳಿಗೊಮ್ಮೆ ಹಾಗೂ 10 ಮಕ್ಕಳಲ್ಲಿ ಒಂದು ಮಗು ಯಾವಾಗ ಬೇಕಾದರೂ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿರುವ ನಮ್ಮ ಭಾರತದಲ್ಲಿ ಸರ್ಕಾರ ಈ ಬಗ್ಗೆ ತೀವ್ರ ಗಮನ ನೀಡಬೇಕಾಗಿದೆ. 1989ರಲ್ಲಿ 'ಯು.ಎನ್ ಕನ್ವೆನ್‌ಶನ್ ಆನ್ ದಿ ರೈಟ್ಸ್ ಆಫ್ ದಿ ಚೈಲ್ಡ್'ಗೆ ಭಾರತ ಸಹಿ ಮಾಡಿದೆ. ಇದರ ಪ್ರಕಾರ ಮಕ್ಕಳ ದೈಹಿಕ, ಮಾನಸಿಕ ರಕ್ಷಣೆಯನ್ನು ಸರ್ಕಾರ ಹೊರಬೇಕು. ನಿರ್ದಿಷ್ಟ ಕಾನೂನುಗಳನ್ನು ರೂಪಿಸುವತ್ತ ಜಾಗ್ರತೆ ಗಮನ ಹರಿಸಬೇಕಾಗಿದೆ. ಮಕ್ಕಳಲ್ಲಿ ಜಾಗೃತಿ, ನಾಗರಿಕರಲ್ಲಿ ಈ ಬಗ್ಗೆ ಪ್ರತಿಕ್ರಿಯೆ, ಕಾರ್ಯಶೀಲತೆ, ಹೋರಾಟ ಇವು ಮಕ್ಕಳ ಮೇಲಿನ ಲೈಂಗಿಕ ದೌರ್ಜನ್ಯ, ಕಿರುಕುಳಗಳನ್ನು ಕಡಿಮೆಯಾಗಿಸುವಲ್ಲಿ, ತೊಲಗಿಸುವಲ್ಲಿ ಮಹತ್ವವಾದ ಪಾತ್ರ ವಹಿಸಬಹುದಾಗಿದೆ.

ಕೆ.ಸತ್ಯನಾರಾಯಣ ಅವರು ಎತ್ತಿದ ಪ್ರಶ್ನೆಗಳ ಕಾರಣದಿಂದ 'ನಮ್ಮ ಮಾನಸ'ದ ಸಂವಾದ ವೇದಿಕೆಯಲ್ಲಿ ಚರ್ಚೆಗಳಾದವು. ಹಲವು ಅಭಿಪ್ರಾಯಗಳು ಮಂಡಿತವಾಗಿವೆ. ಇನ್ನೂ ಹಲವು ಪತ್ರಗಳು ಈ ಸಂಬಂಧವಾಗಿಯೇ ಬಂದಿವೆ. ಚರ್ವಿತ ಚರ್ವಣವಾಗದಿರಲೆಂದು ಎಲ್ಲವನ್ನೂ ಪ್ರಕಟಿಸಲಿಲ್ಲ. ಈ ಸಂಚಿಕೆಯಲ್ಲಿ ಮತ್ತೆ ಕೆ.ಸತ್ಯನಾರಾಯಣರ ಅಭಿಪ್ರಾಯ ಮತ್ತು ನಮ್ಮ ಸಲಹಾ ಮಂಡಳಿಯ ಮುಖ್ಯರೂ, ಖ್ಯಾತ ವಿಮರ್ಶಕರೂ ಆದ ಬಿ.ಎನ್.ಸುಮಿತ್ರಾಬಾಯಿಯವರ ಲೇಖನವನ್ನೂ ಪ್ರಕಟಿಸುವುದರೊಂದಿಗೆ ಈ ಸಂವಾದವನ್ನು ಮುಕ್ತಾಯಗೊಳಿಸುತ್ತಿದ್ದೇವೆ. ಭಾಗವಹಿಸಿ ಅಭಿಪ್ರಾಯ ವಿನಿಮಯಮಾಡಿಕೊಂಡ ಎಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ. ತಮ್ಮ ಸಲಹೆಗಳು ಬರಲಿ. ಪತ್ರಿಕೆಯನ್ನು ಅರ್ಥಪೂರ್ಣವಾಗಿ ರೂಪಿಸಲು ಎಲ್ಲರೂ ಕೂಡಿಯೇ ಶ್ರಮಿಸೋಣ. ವಂದನೆಗಳು.

■


'ವರ್ಕಿಂಗ್ ಕ್ಲಾಸ್'



# ಮಾತಾಡುವ ಕೈಗಳು

● *ಪ್ರೊ॥ ಎಂ.ಎಚ್. ಕೃಷ್ಣಯ್ಯ*

ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸುವ ವಿಶೇಷ ಮಾತು, ಭಾಷೆ, ಮನುಷ್ಯಭಾಷೆ. ಆದರೆ ಭಾಷೆ ಸಮಾಜದಲ್ಲಿ ಹುಟ್ಟುವ, ರೂಪುಗೊಳ್ಳುವ ಮೊದಲು ಮನುಷ್ಯ ಸಂಪರ್ಕ, ಸಂವಹನ ಸಾಧಿಸಿದ್ದ, ದೇಹ ಭಂಗಿ, ಮುಖಭಾವ, ಕೈಸನ್ನೆಗಳಿಂದ ಮಾತನಾಡುತ್ತಿದ್ದ, ತನ್ನ ಇಚ್ಛೆ, ಬೇಕು ಬೇಡಗಳನ್ನು ತಿಳಿಸುತ್ತಿದ್ದ, ಬದುಕು ಸಾಗುತ್ತಿತ್ತು. ಕುತೂಹಲಕಾರಿ ಅಂಶವೆಂದರೆ, ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ವ್ಯಕ್ತಪಡಿಸಬಹುದಾದ ಭಾಷೆ ರೂಪುಗೊಂಡನಂತರವೂ, ಸಹಸ್ರಾರು ವರ್ಷಗಳು ಕಳೆದಿದ್ದರೂ, ಮನುಷ್ಯನ ಮನಸ್ಸಿನ ಚಿಂತನೆಗಳ ದಾಖಲೆಯಾಗಿ ಶಾಬ್ದಿಕ ಸಾಹಿತ್ಯ ಶ್ರೀಮಂತ ಬೆಳವಣಿಗೆ ಕಂಡಿದ್ದರೂ, ಭಾಷೆಯ ಜೊತೆಗೆ, ಆಡುಮಾತಿನೊಡನೆ ಕೈಸನ್ನೆಗಳು ಇಂದಿಗೂ ಉಳಿದು ಬಂದಿವೆ. ಮನುಷ್ಯನ ಅಶಾಬ್ದಿಕ ವರ್ತನೆಯಾಗಿವೆ, ಅಭಿವ್ಯಕ್ತಿಯ ಭಾಗವಾಗಿವೆ. ಆಡುವ ಮಾತು 'ಸುಳ್ಳು' ಆಗಿರಬಹುದು, ಅದರ ಜೊತೆಗೆ ಕೂಡಿಬರುವ ಸನ್ನೆಗಳು ಒಳಗನ್ನು ಬಹಿರಂಗ ಪಡಿಸಬಹುದು. ಭಾಷೆಗೂ ಮೊದಲಿನ ಈ ಸನ್ನೆಗಳು ಸು. ಮೂವತ್ತು ಸಾವಿರ ವರ್ಷಗಳ ಹಿಂದಿನ ಬೇಟೆಗಾರ ಕಾಡುಮನುಷ್ಯನ ಗುಹಾ ಚಿತ್ರಗಳಲ್ಲಿ ಏನೆಲ್ಲ ಹೇಳುತ್ತವೆ. ನಾಗರಿಕತೆ ಬೆಳೆದಂತೆ ಈ ಸನ್ನೆಗಳೂ ಕಲಾ ಮಾಧ್ಯಮವಾದುವು, ವಿಶೇಷ ಅಭಿವ್ಯಕ್ತಿಗೆ ಕಾರಣವಾದುವು. ಚಿತ್ರ, ಶಿಲ್ಪಗಳಲ್ಲಿ ಸನ್ನೆಗಳಿವೆ. ದೇಹವೇ ಅಭಿವ್ಯಕ್ತಿಯ ಮಾಧ್ಯಮವಾಗಿದೆ. ಕ್ರಿಸ್ತ ಪೂರ್ವಕಾಲದ ಗ್ರೀಕ್ ಶಿಲ್ಪಗಳಲ್ಲಿ, ಅದಕ್ಕೂ ಹಿಂದಿನ ಕಣ್ಮರೆಯಾದ ನಾಗರಿಕತೆಗಳಲ್ಲಿ, ಬೌದ್ಧಕಾಲದ ಶಿಲ್ಪಗಳ ವೈವಿಧ್ಯಪೂರ್ಣ ಮುದ್ರೆಗಳಲ್ಲಿ, ಯೋಗ ಧ್ಯಾನ, ಅಂತೆಯೇ ಭರತನ ನಾಟ್ಯಶಾಸ್ತ್ರದ 'ಆಂಗಿಕ' ಅಭಿನಯದ ಅಭಿವ್ಯಕ್ತಿಗಳಲ್ಲಿ ಸನ್ನೆಗಳು ಮಾತನಾಡುತ್ತವೆ. ಗುಹಾ ದೇವಾಲಯಗಳಲ್ಲಿ, ಕಟ್ಟಣೆಯ ಗುಡಿ ಗೋಪುರಗಳಲ್ಲಿ, ದೇವತಾ ವಿಗ್ರಹ, ಶಿಲ್ಪಗಳಲ್ಲಿ ಕೈಗಳು ಮಾತನಾಡುತ್ತವೆ. ಕಾಲದುದ್ದಕ್ಕೂ ದುಡಿಮೆಯ ಹೊಲಗದ್ದೆಗಳಲ್ಲಿ ತೋಟಗಳಲ್ಲಿ ಬೆಳೆಫಲಗಳಲ್ಲಿ ಕೈಗಳು ಮೌನವಾಗಿ ಮಾತನಾಡುತ್ತ ಬಂದಿವೆ. ಇಂದಿನ ಬೃಹತ್ ಉದ್ಯಮಗಳ ಹಿಂದೆಯೂ ಕಾಣದ ಕೈಗಳು ಮಾತನಾಡುತ್ತಿವೆ. ಅಂದಿನಿಂದ ಇಂದಿನವರೆಗೂ ಈ ಅಶಾಬ್ದಿಕ ಮಾತು, ಭಾಷೆ ಕಲಾವಿದರನ್ನು ಕಾಡಿದೆ, ಕಲ್ಪನೆಯನ್ನು ವಿಸ್ತರಿಸಿದೆ. ಕಲಾವಿದೆ ಎಂ. ಶಾಂತಾಮಣಿಯವರ ಕೆಲವು ತಿಂಗಳ ಹಿಂದೆ ನಡೆದ ಏಕವ್ಯಕ್ತಿ ಕಲಾಪ್ರದರ್ಶನದ ಕೇಂದ್ರವಿಷಯ ಇದೆ–ಸನ್ನೆಗಳು ಮಾತನಾಡುತ್ತಿವೆ.

ಎಂ.ಶಾಂತಾಮಣಿಯವರು ಮೈಸೂರಿನ ಹೊರಚಾಚಿರುವ ಗ್ರಾಮೀಣ ಪರಿಸರದಿಂದ ಬಂದವರು. ಬಾಲ್ಯದಿಂದ ಹೊಲಗದ್ದೆಗಳ ಕೆಲಸ, ಮನೆ, ಆಕಳ ಕೊಟ್ಟಿಗೆಗಳ ಕೆಲಸ ಇವೆಲ್ಲವುಗಳ ಅನುಭವಗಳನ್ನು ಅಪ್ರಜ್ಞೆಯ ಭಾಗವಾಗಿಸಿಕೊಂಡು ಬೆಳೆದವರು. ಹಸಿರು, ದನಕರುಗಳು, ಕೆಲಸದ ಸಂದರ್ಭಗಳ ಕೈ ಸ್ಪರ್ಶದ ರೋಮಾಂಚನ, ಸುಖಾನುಭವ, ಜೊತೆಗೇ ದುಡಿಮೆಯ ಕಷ್ಟಗಳ ಅನುಭವ ಪಡೆದವರು. ಮೈಸೂರು 'ಕಾವಾ'ದಿಂದ ಕಲಾಪದವಿ ಪಡೆದು, ಬರೋಡದಲ್ಲಿ ಕಲೆಯಲ್ಲಿ ಸ್ನಾತಕೋತ್ತರ ಪದವಿ ಪೂರ್ಣಗೊಳಿಸಿ ಜಾಗತಿಕ ನಗರವಾಗುತ್ತಿರುವ ಬೆಂಗಳೂರಿನಲ್ಲಿ ನೆಲೆಸಿರುವವರು. ಒಂದೆಡೆ ಬಾಲ್ಯದ ನೆನಪುಗಳು, ನಶಿಸಿ ಹೋಗುತ್ತಿರುವ ಪಾರಂಪರಿಕ ಬದುಕು ಸಂಸ್ಕೃತಿಗಳು ಐ.ಟಿ.ನಗರದಲ್ಲಿ ಮೂಡಿಸುತ್ತಿರುವ ವೈರುಧ್ಯ, ವೈದೃಶ್ಯಗಳು ಅವರನ್ನು ಕಾಡದೆ ಬಿಟ್ಟಿಲ್ಲ. ಇಂದು ಉದ್ಯಾನ ನಗರ ಸಿಮೆಂಟ್ ಮತ್ತು ಗಾಜುಗಳ ಬಿಸಿಲಿನ ಕಾಡಾಗಿದೆ; ನಿವೃತ್ತರ ಸ್ವರ್ಗವೆನಿಸಿದ ನೆಲೆ ತರುಣರ ಯಾಂತ್ರಿಕ ವೇಗದ ಬದುಕಿನ ತಾಣ ವಾಗಿದೆ. ವೇಗದ ಬದುಕು, ವೇಗದ ಸಾವು. ಇವುಗಳ ನಡುವೆ ಮನಸ್ಸು, ದೇಹಗಳ ತುಯ್ದಾಟ. ಜಾಗತಿಕ ಹಳ್ಳಿಯ ಯಾತ್ರಿಕ ಭಾವನಾರಹಿತ ಮಾನಸಿಕ ಆತಂಕಗಳಲ್ಲಿ ಬದುಕು ಎತ್ತ ಸಾಗುತ್ತಿದೆ ಎಂಬುದು ಅವರನ್ನು ಕಾಡುತ್ತಿದೆ. ಈ ದ್ವಂದ್ವ–ನೆನಪುಗಳು ಮತ್ತು ವರ್ತಮಾನದ ವಾಸ್ತವ, ಹಳ್ಳಿಯ ಆತ್ಮೀಯ ವಾತಾವರಣ ಮತ್ತು ನಗರದ ಬಿಕ್ಕಟ್ಟಿನ ಧಾವಂತ, ಕಳೆದು ಹೋಗುತ್ತಿರುವ ವೈಯಕ್ತಿಕ ಸಂಬಂಧಗಳು ಮತ್ತು ಅನಾಮಿಕ ವಲಸಿಗರು–ಇವೇ ಅವರ ಕಲಾಕೃತಿಗಳಿಗೆ ಪ್ರೇರಣೆಯಾಗಿವೆ. ಇಲ್ಲಿ ತಮ್ಮ ದೇಹವೇ ತಮ್ಮ ಕೈಗಳೇ ಕೇಂದ್ರವಾಗಿ ಮಾತನಾಡತೊಡಗುತ್ತವೆ. ಅವರೇ ಹೇಳುವಂತೆ ಚಿಕ್ಕಂದಿನಿಂದಲೂ ದೇಹ, ಕೈಗಳು, ಸ್ಪರ್ಶ ಅವರಿಗೆ ಮುಖ್ಯವಾದುವೆ. ಈಗಲೂ ತಮ್ಮನ್ನು ಕಲಾವಿದೆ ಎಂದು ಕರೆದು ಕೊಳ್ಳುವುದಕ್ಕಿಂತ ಚಿತ್ರ ಕೆಲಸದ ಶ್ರಮಿಕಳೆಂದರೇ ತೃಪ್ತಿ. ದೇಹ ಮತ್ತು

ದೇಹದ ಅಂಗವೇ ಆದ ಕೈಗಳು ಅವರ ಅಭಿವ್ಯಕ್ತಿಯ ಕೇಂದ್ರವಾಗಿ, ರೂಪಕವಾಗಿ ಮಾರ್ಪಟ್ಟಿವೆ.

ಇದಕ್ಕೂ ಹಿಂದಿನ ಒಂದು ಪ್ರದರ್ಶನಕ್ಕೆ **'ಮೌನ ಮಾತು'** ಎಂಬ ಶೀರ್ಷಿಕೆ ನೀಡಿದ್ದರು. ಎರಡು ಕೈಗಳ ನಡುವಿನ ತೆರಪಿನಲ್ಲಿ ನಡೆಯುವ ಮೌನ ಮಾತಿನ ಜಗತ್ತನ್ನು ಸೃಷ್ಟಿಸಿದ್ದರು. ನೃತ್ಯ ಮುದ್ರೆಗಳಂತೆ, ಮೂಕರ ಭಾಷಾ ಸಂವಾದದಂತೆ ವೈವಿಧ್ಯಪೂರ್ಣ ಸನ್ನೆಗಳನ್ನು ಸೃಷ್ಟಿಸಿದ್ದರು. ಈಗ ಅವು ಬಿಡಿ ಬಿಡಿಯಾಗಿ ಹರಳು ಕಟ್ಟಿದಂತೆ ಕಲಾಕೃತಿಗಳಾಗಿವೆ, ಇಡೀ ಅನುಭವದ ಸಂಕೇತವಾಗಿದೆ. ಅಕ್ರಿಲಿಕ್ ಬಣ್ಣ, ಅಲ್ಲಲ್ಲಿ ಜಲವರ್ಣ ಬಳಸಿದ ಕಲಾರಚನೆಗಳು. ಇಲ್ಲಿ ಸನ್ನೆಗಳು ಏನೆಲ್ಲ ಮಾತನಾಡುತ್ತಿವೆ. ಕೆಲವು ಕೃತಿಗಳನ್ನು ಗಮನಿಸಬಹುದು. ಹಿಂದಿನ 'ಮೌನ ಮಾತು' ಪ್ರದರ್ಶನದ ಒಂದು ತ್ರಿಫಲಿಕ ಕೃತಿ (ಮೂರು ಫಲಕಗಳನ್ನು ಕೂಡಿಸಿ ಏಕೈಕ ಸಮಗ್ರ ಬೃಹತ್‌ಕೃತಿಯಾಗಿ ಮಾಡಿರುವುದು) ಈ ಬಾರಿ 'ಗೆಶ್ಚರ್ಸ್ ಸ್ಪೀಕ್' ಪ್ರದರ್ಶನದಲ್ಲೂ ಇತ್ತು. ಇದೊಂದು ಮಹತ್ವದ ರಚನೆ. ಈ ಬೃಹತ್ ಚಿತ್ರದ ಪ್ರತ್ಯೇಕವಾಗಿ ತಲವಿಂಗಡನೆ ಮಾಡಿದ ಎಡಬಲ ಅಂಚುಗಳಲ್ಲಿ ಇಬ್ಬರು ಸೈನಿಕರು. ಯುದ್ಧದ ಉಡುಪು, ಕೈಗಳಲ್ಲಿ ಅತ್ಯಾಧುನಿಕ ಶಸ್ತ್ರವಿಡಿದು ಹೆಜ್ಜೆ ಮುಂದಿಟ್ಟಿರುವ, ಆದರೆ ಮುಖಚಿತ್ರ ಕೇಂದ್ರದತ್ತ ತಿರುಗಿರುವ ಆಳೆತ್ತರದ ಆಕೃತಿಗಳು. ಇವರು ರಾಷ್ಟ್ರದ ಗಡಿರಕ್ಷಕರೆ, ಒಳನಾಡ ಸಂರಕ್ಷಕರೆ ಎಂಬಲ್ಲಿ ವ್ಯಂಗ್ಯವಿದೆ. ಚಿತ್ರದ ಶೀರ್ಷಿಕೆ 'ಹೋಂಲ್ಯಾಂಡ್ ಸೆಕ್ಯೂರಿಟಿ' ಎಂದು. ಮಧ್ಯದ ಫಲಕ ವಿಶಾಲವಾಗಿ ಇಡೀ ಚಿತ್ರವನ್ನು ಆವರಿಸುವಂತಿದೆ. ನಡುವಿನ ದೃಶ್ಯ ರುದ್ರಭಯಂಕರ. ಭುಗಿಲೆದ್ದ ಬೆಂಕಿಯ ಜ್ವಾಲೆಗಳು ಅಡಿಯಿಂದ ಮೇಲಂಚಿನವರೆಗೂ ಇರುವ ತಾಯಿಮಗುವನ್ನು ಆವರಿಸಿವೆ. ಜ್ವಾಲೆಗಳ ಹಳದಿ ಕೆಂಪು ಬಹುಭಾಗ ಆವರಿಸಿದೆ. ತಾಯಿ ಮಗುವಿನ ಒಂದು ಪಾರ್ಶ್ವದಲ್ಲಿ ಹಿನ್ನೆಲೆಯಲ್ಲಿ ಜನಸಮೂಹದ ಸಂಕೇತದ ತಲೆಗಳು, ಅಸ್ಪಷ್ಟ ಆಕಾರಗಳು, ಅವುಗಳ ಪಕ್ಕದಲ್ಲಿ ಅಂಚೆ ಮುದ್ರೆಯಂತೆ ಒಂದು ಮೊಹರು. ಅದೂ 'ಹೋಂ ಲ್ಯಾಂಡ್ ಡಿಪಾರ್ಟ್‌ಮೆಂಟ್' ಎಂದು ಸಾರುತ್ತಿದೆ. ಬೆಂಕಿಗೆ ಆಹುತಿಯಾಗುತ್ತಿರುವ ತಾಯಿಯ ಕಂಕುಳ ಮಗುವಿನ ನಿಲುವು ಮಾತೆ ಮೇರಿ ಮತ್ತು ಮಗು ಕ್ರಿಸ್ತನನ್ನು ನೆನಪಿಸುವಂತಿದೆ. ಆಕೆಯ ನೀಳ ಕೊರಳು, ಬಾದಾಮಿ ಮುಖ ಎಡಕ್ಕೆ ಸ್ವಲ್ಪ ವಾಲಿದೆ. ಮ್ಯಾಡಿಲಿಯಾನಿಯಂ ಸುಂದರಿಯ ಬಾಗಿದ ಕೊರಳಿನಂತೆ, ಆದರೆ ಇಲ್ಲಿ ರುದ್ರ, ದೈನ್ಯತೆಯೇ ಆಕೃತಿಯಾದಂತೆ. ಬಲಹಿನ್ನೆಲೆಯಲ್ಲಿ ಕಮಾನಿನಂತಹ ದಟ್ಟ ಬಿಳುಪು ಮಿಶ್ರಿತ ಬಣ್ಣದ ಪಟ್ಟಿಗಳು, ಚರ್ಚಿನ ಒಳವಿನ್ಯಾಸದ ಸೂಚನೆಯೇ? ಇವಾವುದೂ ಆಗಬೇಕಿಲ್ಲ. ಅಗ್ನಿಗಾಹುತಿಯಾಗುತ್ತಿರುವ ಹೆಣ್ಣಿನ ಇಡೀ ನಿಲುವು ಏಕಕಾಲಕ್ಕೆ ದೌರ್ಜನ್ಯದ, ದಯನೀಯ ಸ್ಥಿತಿಗಳ ಸಂಕೇತವಾಗುತ್ತದೆ. ಅಕ್ಕ ಪಕ್ಕದ ಸೈನಿಕರ ನಿಲುವು ದೃಶ್ಯದ ವ್ಯಂಗ್ಯವನ್ನು ವೈದೃಶ್ಯದ ಮೂಲಕ ಹೆಚ್ಚಿಸುತ್ತದೆ. ಯಾರ ರಕ್ಷಣೆ, ಯಾವ ರಕ್ಷಣೆ ಎಂಥ ರಕ್ಷಣೆ? ಈ ವ್ಯಂಗ್ಯ ನಮ್ಮ ದೇಶದ ದ್ವಂದ್ವವನ್ನು ಧ್ವನಿಸುತ್ತದೆ. ಚಿತ್ರದ ಬೃಹದಾಕಾರವೂ ನೋಡುಗನನ್ನು ಅಪ್ಪಳಿಸುವಂತಿದೆ. ಇಡೀ ಚೈತನ್ಯವನ್ನು ನಡುಗಿಸುವಂತಹ ಆಘಾತ ನೀಡುವಂತಿದೆ. ವಿವರ ಬೇಕಿಲ್ಲ, ವಿವರಣೆ ಬೇಕಿಲ್ಲ. ಆಗುವ ಅನುಭವ ಸದಾ ಕಾಡುವಂತಹುದು.

ಇನ್ನೊಂದು ದ್ವಿಫಲಕ ಚಿತ್ರ (ಎರಡು ಬೃಹತ್ ಫಲಕಗಳನ್ನು ಕೂಡಿಸಿ ಸಮಗ್ರ ಕೃತಿಯಾಗಿಸಿದೆ). ಇಡೀ ಚಿತ್ರವನ್ನು ಆವರಿಸುವುದು ಮೇಲೆತ್ತಿರುವ ಎರಡು ಕೈಗಳು, ಅಂಗೈಗಳು. ದುಡಿಯುವ ಕೈಗಳು. ದುಡಿಯುವ ಕೈಗಳ ಅಂಗೈಯಲ್ಲಿ ಸೂಕ್ಷ್ಮ ಗೆರೆಗಳಿರುವುದಿಲ್ಲ, ಎರಡು ಮೂರು ಮಡಿಕೆಯ ಗೆರೆಗಳ ಹೊರತು. ಕೈಗಳ ಹಿನ್ನೆಲೆಯ ಅಭಿರಚನೆಗಳು, ಮೈವಳಿಕೆಗಳೂ ಗಮನಾರ್ಹ. ಹಸಿರು ಹಿನ್ನೆಲೆಯಲ್ಲಿ ಕಾಣುವ ಹಳದಿ ರೇಖೆಗಳ ಮರಗಿಡಗಳು ಹಸಿರಿನಲ್ಲಿ ಮೂಡಿರುವ ಅಡ್ಡಲಂಬ ರೇಖೆಗಳು ವಿದ್ಯುನ್ಮಾನದ ಸೂಕ್ಷ್ಮ ಬಿಲ್ಲೆಯ ವಿನ್ಯಾಸದಂತೆ. ಹೊಲಗದ್ದೆ ಇರಲಿ, ಐಟಿ ಇರಲಿ ದುಡಿಯುವ ಪ್ರಾಮುಖ್ಯ ತಪ್ಪಿದ್ದಲ್ಲ. ವರ್ಕಿಂಗ್ ಕ್ಲಾಸ್, ಶ್ರಮಿಕ ವರ್ಗದ ಸೂಚನೆ ಶೀರ್ಷಿಕೆಯಲ್ಲಿದೆ. ಕೊಂಚ ಮುಂದುವರಿದು ಅರ್ಥೈಸಬಹುದಾದರೆ ಈ ಶ್ರಮಿಕ ಹಸ್ತಗಳ ಮುದ್ರೆ ಅಭಯ ಸೂಚಿಸುವುದೂ ಆಗಬಹುದು–ಬದುಕಿನ ಅಸ್ತಿತ್ವಕ್ಕೆ, ಬದುಕಿನ ನಿರಂತರತೆಗೆ. ಇಡೀ ಪ್ರದರ್ಶನದ ರಚನೆಗಳಿಗೆ ರೂಪಕವಾಗಿ ಈ ಚಿತ್ರ ನಿಲ್ಲುತ್ತದೆ.


'ಪಿಕ್ಸಲೇಷನ್'

ಮತ್ತೊಂದು ಚಿತ್ರ 'ಪಿಕ್ಸಲೇಷನ್' ಸ್ಪಷ್ಟಾಸ್ಪಷ್ಟ ಬುದ್ಧನ ಬೃಹತ್ ಶಿಲ್ಪಕೃತಿ ಸ್ಫೋಟಗೊಂಡು ಛಿದ್ರವಾಗಿ ನಾಶವಾದ ಬೂಮಿಯಾನ್ ಬುದ್ಧಶಿಲ್ಪವನ್ನು


'ಯೋಗಮುದ್ರೆ'

'ನೆನಪಿಸುತ್ತದೆ'. ಅದರ ಅಕ್ಕ ಪಕ್ಕ ಅಂಕಣಗಳಿವೆ ಸಿಗ್ನಲ್ ಕೆಟ್ಟ ಟಿ.ವಿ. ಚಿತ್ರದ ಚಿತ್ರಾಂಶಗಳಂತೆ. ಒಂದರಲ್ಲಿ 'ಟೆಸ್ಟ್ ಸಕ್ಸೆಸ್' ಎಂದು ಆಯತಾಕಾರ ಚೌಕಟ್ಟಿನ ಒಳಗಿದೆ. ಚಿತ್ರದ ತಳದಲ್ಲಿ ವಿವಿಧ ಸಂಕೇತಗಳಿವೆ. ಅಡಕ ಬಿಲ್ಲೆಯ ಮೇಲಿನ ಸಂಗೀತ ಸೂಚಕ ಚಿಹ್ನೆ, ಟಿ.ವಿ. ಕ್ಯಾಮರಾ \ ವೆಬ್‌ಸೈಟಿನ ಅಟ್ ಚಿಹ್ನೆ \, ಮನೆಯಲ್ಲಿನ ಆಂಟೆನಾ ಇತ್ಯಾದಿ. ಇಪ್ಪತ್ತೊಂದನೆಯ ಶತಮಾನ-ಏನೆಲ್ಲ ಮನುಷ್ಯನ ಸಾಧನೆಗಳು, ವಿಜ್ಞಾನದ ಪ್ರಗತಿ ಇವೆಲ್ಲದರ ನಡುವೆ ಭಗ್ನ ಬುದ್ಧ ಮೂರ್ತಿ. ಆ ಮೂರ್ತಿ ಕೇವಲ ಶಿಲ್ಪವಲ್ಲ, ಮಾನವೀಯತೆಯ ಸಂಕೇತ. ಭಗ್ನ ಮಾನವೀಯ ಮೌಲ್ಯಗಳು. ಜೊತೆಗೆ ಅಸಹನೆ, ಅಸಹಿಷ್ಣುತೆ, ಮತಭ್ರಾಂತಿ ಎಬ್ಬಿಸಿದ ಮೃಗೀಯತ್ವಗಳು, ಕ್ರೌರ್ಯಗಳ ಸಂಕೇತ ಸಹ. ಮಾನವೀಯ ಸಂಬಂಧಗಳನ್ನು ಮುರಿಯುವ, ಹಿಂಡುವವೂ ಕೈಗಳೆ; ಸ್ಫೋಟಿಸುವವೂ ಕೈಗಳೆ. ಈ ವೈರುಧ್ಯಗಳು ಕಾಡುತ್ತವೆ. ಅಂತರ್ಮುಖಿಯಾಗಿಸುತ್ತವೆ. ನಮ್ಮಲ್ಲಿ ಬೆಳಗ್ಗೆ ಎದ್ದಾಗ, ಕೈಗಳನ್ನು ಸವರಿ ಅಂಗೈಗಳನ್ನು ಮೊದಲು ನೋಡಿಕೊಳ್ಳುವ ಪದ್ಧತಿ ವರ್ತನೆ ಹಿಂದೆ ಇತ್ತಲ್ಲವೆ. ಆಗಿನ ಒಂದುಕ್ಷಣದ ಹಾಯ್ದು ಹೋಗುವ ಚಿಂತನೆಗಳು-ಕಥೆಯಾಗಬಲ್ಲುವು.

ಇನ್ನೊಂದು ಗಮನಾರ್ಹ ಚಿತ್ರ 'ಯೋಗಮುದ್ರೆ'ಯದು. ಚಿರ ಪರಿಚಿತ ಹಸ್ತಮುದ್ರೆಯ ಬೃಹತ್ ಚಿತ್ರ, ಇಲ್ಲಿ ಹಿನ್ನೆಲೆಯ ವಿನ್ಯಾಸಗಳು ಗಮನಾರ್ಹ. ಆಧುನಿಕ ವ್ಯಾಪಾರದ ಸಂಕೇತವಾದ ಬಿಲ್‌ಗಳ ಅಥವಾ ಸರಕುಗಳ ಪೆಟ್ಟಿಗೆಗಳ ಮೇಲೆ ಮುದ್ರಿತ ಕೋಡ್-ಸಂಕೇತ ಗೆರೆಪಟ್ಟಿಗಳು ಚೌಕಾಕಾರವಾಗಿ ಅಲ್ಲಲ್ಲಿ. ಮತ್ತೆ ಸೂಕ್ಷ್ಮ ಬಿಲ್ಲೆಯ (ಮೈಕ್ರೋಚಿಪ್‌ನ) ಸಂಪರ್ಕ ವಿನ್ಯಾಸಗಳು, ವಿಜ್ಞಾನದ ಕರಡು ಟಿಪ್ಪಣಿಗಳು, ಲೆಕ್ಕಗಳು ಇತ್ಯಾದಿ. ವಿಜ್ಞಾನದ ಸಾಧನೆ, ಬಾಹ್ಯ ಜಗತ್ತಿನ ಆವಿಷ್ಕಾರಗಳು ಒಂದುಕಡೆ ಜಾಗತಿಕ ಸರಕು, ಹೊಟ್ಟೆಬಾಕ ಸಂಸ್ಕೃತಿಯ ಸಂಕೇತಗಳು. ಮತ್ತೊಂದೆಡೆ, ಹಿನ್ನೆಲೆಯಾಗಿ ನಡುವೆ ಯೋಗಮುದ್ರೆ. ಯಾವ ಆವಿಷ್ಕಾರ, ಸಾಧನೆಗಳಿರಲಿ ಅವು ಬಾಹ್ಯ ನಮ್ಮ ದೇಹದ ಒಳಗಿನ ನೆಮ್ಮದಿ, ಮನಃಶಾಂತಿ ಅಂತಿಮವಾಗಿ ಧ್ಯಾನ, ಯೋಗ ಎಂದರೆ ನಮ್ಮೊಳಗೇ ಸಾಧಿಸಬೇಕಾದದ್ದು. ಭೋಗ ಮತ್ತು ಶಾಂತಿಗಳ ವೈರುಧ್ಯ ಇಂದು ಜಾಗತಿಕ ಮಟ್ಟದಲ್ಲೇ ಕಾಡುತ್ತಿರುವ ಸಮಸ್ಯೆ.

'ದಿ ಮೋಸ್ಟ್ ಪ್ರೆಷಿಯಸ್ ಥಿಂಗ್ಸ್ ಇನ್ ಲೈಫ್ ಡೋನ್ಟ್ ಕಾಸ್ಟ್ ಎನಿಥಿಂಗ್' ಎಂಬ ಒಂದು ಚಿತ್ರವಿದೆ. ಕೂಡಿಮಡಚಿದ ಕೈಗಳು, ಬೆರಳುಗಳನ್ನು ಕೂಡಿಸಿ ಮುಗಿದ ಕೈಗಳು. ಹಿನ್ನೆಲೆಯ ಹಸಿರು ಎಲೆಗಳ ಗಿಡಗಳ ನಡುವಿನ ವಿನ್ಯಾಸಗಳು ಬೆರಳುಗಳ ಅಂಗೈಯ ರೇಖಾಮುದ್ರೆಗಳಿಂದ ಕೂಡಿವೆ. ಈ ಸನ್ನೆಗಳು (ಗ್ರೆಶ್ಚರ್ಸ್) ಸಂಜ್ಞೆಗಳಾಗಿ (signs) ಅರ್ಥವತ್ತಾಗುತ್ತವೆ. ಮಾನವ ಸಂಬಂಧಗಳು, ಪರಸ್ಪರ ವರ್ತನೆಗಳು, ನಗು ಸುಖ ಸೌಹಾರ್ದ ಭಾವನೆಗಳು ದೊಡ್ಡ ದೊಡ್ಡ ಶಬ್ದಗಳಲ್ಲಿ ಕೈಸನ್ನೆಗಳಲ್ಲೆ ಇವೆ. ಹತ್ತಿರ ತರುತ್ತವೆ, ಭಾವನೆಗಳನ್ನು ಸಂವಹನ ಮಾಡುತ್ತವೆ, ಪರಸ್ಪರ ಹೃದಯಗಳನ್ನು ಬೆಸೆಯುತ್ತವೆ. 'ಸರ್ಕಸ್ ಆಫ್ ಲೈಫ್' ಚಿತ್ರದಲ್ಲೂ ಕೈಸನ್ನೆಗಳ ಹಿನ್ನೆಲೆಯಲ್ಲಿ ದೊಂಬರಾಟದ ಭಂಗಿಗಳಿವೆ. ಸನ್ನೆಗಳು ನೃತ್ಯ ಮುದ್ರೆಗಳೆ-ವಿಶಿಷ್ಟ ಅಶಾಬ್ದಿಕ ಭಾಷೆ. ಈ ಸಾಮಾಜಿಕ, ಸಾಂಸ್ಕೃತಿಕ ಪರಂಪರೆಯ ಚಿಂತನೆಗಳೊಡನೆ


'ಹೋಮ್ ಲ್ಯಾಂಡ್ ಸೆಕ್ಯುರಿಟಿ'

ವರ್ತಮಾನ ಸದಾ ಜಾಗೃತವಾಗಿದ್ದಂತೆ ತೋರುತ್ತದೆ. ಚಾಚಿ ಕೂಡಿಸಿದ ಬೊಗಸೆಗೈ ಚಿತ್ರದ ಶೀರ್ಷಿಕೆ. ಬೊಗಸೆಗೈ ಮೇಲಿನ ಮೊಹರು- ಸಾರುತ್ತಿರುವುದು 'ಪೇಟೆಂಟೆಡ್ ಅಂಡ್ ಔಟ್ ಸೋರ್ಸ್‌ಡ್'. ಐ.ಟಿ.ನಗರ ಬೆಂಗಳೂರಿನ ಸ್ಥಿತಿ. ನಮ್ಮ ಕೈಗಳು ಜಾಗತೀಕರಣದ ತೀವ್ರತೆಯಲ್ಲಿ ಔಟ್‌ಸೋರ್ಸ್‌ಡ್. ಕಾಣದವರಿಗಾಗಿ ಗುಲಾಮಗಿರಿ, ಕೈಗಳನ್ನು ಮಾರಿಕೊಂಡಿರುವ ಸ್ಥಿತಿ. ಪ್ರದರ್ಶನ ಸ್ಥಳಕ್ಕೆ ಕಾಲಿಟ್ಟಂತೆ ಕಾಣುವಂತೆ ಎದುರಿಗೆ ತೂಗುಹಾಕಿದ ಚಿತ್ರ, ನೂಲಿನ ಕೈಹೆಣಿಕೆಯ ವಸ್ತ್ರ-ಚಿತ್ರದಲ್ಲೂ ಎರಡು ಕೈಗಳು ಮತ್ತು ದಾರ-ಶೀರ್ಷಿಕೆ: **ಮೇಡ್ ಇನ್ ಇಂಡಿಯಾ**. ಬಲಗಡೆ ಮೇಲು ಅಂಚಿನಲ್ಲಿ ಮಾರಾಟ ರೇಖಾಚಿಹ್ನೆ. ಮನಃಸಂತೋಷದ, ಸ್ವತಃ ಕೈಗಳಿಂದ ಸಿದ್ಧಪಡಿಸಿದ, ತೃಪ್ತಿ ನೀಡುವ ವಸ್ತ್ರವೂ, ಎಂದರೆ ಆ ಪರಂಪರೆಯೂ ಇಂದು ಮಾರಾಟದ ಸರಕಾಗಿದೆ, ಭೋಗದ ಸಂಸ್ಕೃತಿಯ ಅನ್ಯರಿಗಾಗಿ. ಗಾಂಧಿ ನೆನಪಾಗುತ್ತಾರೆ. ಚರಕ ನೆನಪಾಗುತ್ತದೆ. ಸ್ವತಃ ನೇಯ್ದ ನೂಲಿನ ಬಟ್ಟೆಯ ಸಂಕೇತಾರ್ಥ ನೆನಪಾಗುತ್ತದೆ. ಭಾರತ ಏನಾಗುತ್ತಿದೆ. ಕಲಾವಿದೆ ಶಾಂತಾಮಣಿಯವರನ್ನು ಕಾಡುವ ಚಿಂತನೆಗಳು, ದ್ವಂದ್ವಗಳು, ತಳಮಳಗಳು, ನಿಸರ್ಗದೊಡನೆ ಭಾಗವಾಗಿದ್ದ, ಒಡನಾಡಿದ್ದ ನೆನಪುಗಳು ರೂಪತಳೆದ ಬಗೆ, ಅಭಿವ್ಯಕ್ತಿ ಕಂಡ ಬಗೆ ಹೀಗೆ. ಸನ್ನೆಗಳು ಏನೆಲ್ಲ ತಿಳಿಸಬಲ್ಲವು, ಎದೆ ಮುಟ್ಟಬಲ್ಲುವು.

ಎಂ. ಶಾಂತಾಮಣಿ ಸೂಕ್ಷ್ಮ ಸಂವೇದನೆಯ ಪ್ರತಿಭಾವಂತ ಕಲಾವಿದೆ. ಪ್ರಾರಂಭದಲ್ಲಿ (1995) ಹೆಣ್ಣಿನ ಮೇಲಿನ ಹಿಂಸಾತ್ಮಕ ದೌರ್ಜನ್ಯ ಕ್ರೌರ್ಯಗಳನ್ನು ಚಿತ್ರಿಸಿದ್ದರು. (ವೆಂಕಟಪ್ಪ ಆರ್ಟ್ ಗ್ಯಾಲರಿ ಪ್ರದರ್ಶನ: ದಿ ಸೈಲೆನ್ಸ್ ಆಫ್ ಫ್ಯೂರೀಸ್ ಅಂಡ್ ಸಾರೋಸ್.) ಗೆಳೆಯರೊಡಗೂಡಿ (ಬಾಬು ಈಶ್ವರ ಪ್ರಸಾದ್, ಎಸ್.ಎಸ್.ಹರ್ಷ, ರಮೇಶ್ಕಲ್ಲೂರ್) ಕೂಡ ಚಿತ್ರ ರಚಿಸಿದ್ದುಂಟು. ಹಲವು ಸಮೂಹ ಪ್ರದರ್ಶನಗಳಲ್ಲಿ ಭಾಗಿಯಾಗಿದ್ದಾರಲ್ಲದೆ ಏಕವ್ಯಕ್ತಿ ಪ್ರದರ್ಶನಗಳನ್ನೂ ನೀಡಿದ್ದಾರೆ. ಅಪರೂಪದ ಇನ್ಲ್ಯಾಕ್ ಶಿಷ್ಯವೇತನ, ಇಂಗ್ಲೆಂಡಿನ ಚಾರ್ಲ್ಸ್ ವ್ಯಾಲಸ್ ಶಿಷ್ಯವೇತನಗಳನ್ನು ಪಡೆದವರು. ಇಂದು ಅವರ ಚಿಂತನೆ, ವಿಚಾರಗಳು, ಹಾಗೂ ಸಂವೇದನೆ ವಿಸ್ತಾರಗೊಂಡಿವೆ. ಶಕ್ತಿಯುತವಾದ ಅವರ ಅಭಿವ್ಯಕ್ತಿ ವಿಸ್ಮಯಗೊಳಿಸುತ್ತದೆ. ■

## ಮುಗಿಲ ದಾರಿ





ಮುಗಿಲ ದಾರಿಯಲ್ಲಿ
ಗಾಳಿರಥವು ತೇಲಿ ಹೋಗುತ್ತಿದೆ
ಸಂಖ್ಯೆಯಿಲ್ಲದ ಹಕ್ಕಿ
ಬಂದಿದೆ ರೆಕ್ಕೆ ಕೊಟ್ಟಿದೆ
ಪುರುಸತ್ತು ಬೇಕು
ಪೆಟ್ಟಿಗೆಯಲ್ಲಿ ಮುಚ್ಚಿಟ್ಟ
ಸೀರೆಗಳನ್ನೆಲ್ಲ ಉಟ್ಟುಬಿಡಬೇಕು.
ಸಾಲು ನಿಲ್ಲಿರಿ
ಮುತ್ತ ಹುಡುಕುವೆ
ಸಿಕ್ಕರೆ ನವಿಲಗರಿಯನ್ನೇ
ಕೇಳುವೆ ಮುತ್ತು
ಗರಿಯನ್ನು ಪೋಣಿಸಿ
ಇಟ್ಟು ನೋಡುವೆ ರೆಕ್ಕೆಗೆ
ನನ್ನ ಎಲ್ಲಾ ಕನಸಿಗೂ
ಮುಗಿಲು ನೀವು ಸೇರಿ
ಬನ್ನಿರಿ ತೆಕ್ಕೆಗೆ
ಎಲ್ಲಾ ಸೇರಿ ಮುಗಿಲ
ದಾರಿಯಲ್ಲಿ ಸಾಗಿಬಿಡುವ
ಗಾಳಿರಥಕ್ಕೆ ಜೀವಕೊಡುವ

**- ತಾಜುಮಾ**




# ಚರ್ಚಿಸಲೇಬೇಕಾದ ಕೃತಿ 'ಸೆಕೆಂಡ್ ಸೆಕ್ಸ್'

*ಎಚ್.ಎಸ್. ಚಂಪಾವತಿ*

೧೯೪೯ರಲ್ಲಿ ಫ್ರೆಂಚ್ ಭಾಷೆಯಲ್ಲಿ ಪ್ರಕಟಗೊಂಡ ಕೃತಿ 'ದ ಸೆಕೆಂಡ್ ಸೆಕ್ಸ್'. ಮಹಿಳಾ ಚಳವಳಿಯಲ್ಲಿ ನೇರವಾಗಿ ಭಾಗಿಯಾಗಿರದ ಸಿಮೊನ್ ದ ಬೊವಾ - ಅಸ್ತಿತ್ವವಾದಿ ಹಾಗೂ ಸಾರ್ತ್ರೆಯ ಸಂಗಾತಿ. ಈ ಕೃತಿಯನ್ನು ಎಚ್.ಎಸ್. ಶ್ರೀಮತಿಯವರು ಈಗ ಕನ್ನಡಕ್ಕೆ ಅನುವಾದಿಸಿದ್ದಾರೆ. ಕಳೆದ ೫೦ ದಶಕಗಳಲ್ಲಿ ಚಳವಳಿ, ರಾಜಕೀಯ, ತಾತ್ವಿಕತೆ, ಸಮಾಜದಲ್ಲಿ ಹಲವಾರು ಬದಲಾವಣೆಗಳು ನಡೆದುಹೋಗಿರುವುದರಿಂದ ಈ ಪುಸ್ತಕ ಕನ್ನಡಕ್ಕೆ ಅನುವಾದಗೊಂಡಿರುವುದು ಬಹಳ ತಡವಾಯಿತೇನೋ! ಆದಾಗ್ಯೂ ಮಹಿಳೆಯ 'ಅನ್ಯ' ಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಯಸುವ ಈಗಿನ ಯುವಜನಾಂಗದ ಮಹಿಳೆಯರು ಓದಲೇಬೇಕಾದ ಪುಸ್ತಕವೆಂಬುದಂತೂ ನಿಜ. ಈ ಅನುವಾದ ೧೯೭೮ರಲ್ಲಿ ಇಂಗ್ಲಿಷ್‌ನಲ್ಲಿ ಅನುವಾದಿಸಲ್ಪಟ್ಟ ಎಚ್.ಎಂ. ಪಾರ್ಶಲೆಯ ಇಂಗ್ಲಿಷ್ ಅನುವಾದ ಆಧರಿಸಿರುವುದರಿಂದ ಮೂಲ ಕೃತಿಯ ಎಲ್ಲಾ ಲೇಖನಗಳು ಇಲ್ಲಿ ಸಿಗುವುದಿಲ್ಲ. ಶ್ರೀಮತಿಯವರು "The myth of women in Five authors' ಎಂಬ ಅಧ್ಯಾಯದ ಬದಲು - ಕನ್ನಡ ಸಂದರ್ಭಕ್ಕೆ ಅನ್ವಯಿಸಿಕೊಂಡು ಒಂದು ಪ್ರತ್ಯೇಕ ಅಧ್ಯಾಯವನ್ನು ಅನುಬಂಧದಲ್ಲಿ ಕೊಟ್ಟಿದ್ದಾರೆ.

ಈ ಕೃತಿ ಪ್ರಕಟವಾದಾಗ ಸಿಮೊನ್ ದ ಬೊವಾ ಎದುರಿಸಿರಬಹುದಾದ ಅನೇಕ ಸಮಸ್ಯೆಗಳ ಮೇಲೆ ಡೀರ್ ಡ್ರ ಬೇರ್‌ರವರ ಪ್ರಸ್ತಾವನೆ ಬೆಳಕು ಚೆಲ್ಲುತ್ತದೆ. ಹಾಗೆಯೇ ಪೀಠಿಕೆಯಲ್ಲಿ ಸಿಮೊನ್ ಸ್ತ್ರೀತ್ವದ ಕಲ್ಪನೆಯ ಬಗ್ಗೆ, ಸ್ತ್ರೀತ್ವದ ಬಗ್ಗೆ ಮಾತನಾಡುತ್ತಾರೆ. ಆಕೆ ಹೇಗೆ 'ಅನ್ಯ'ಳಾಗಿದ್ದಾಳೆ ಎಂದು ಬರೆಯುತ್ತಾರೆ. ಮಹಿಳೆ 'ಅನ್ಯ'ಳಾಗಿರುವುದನ್ನು ಜೀವಶಾಸ್ತ್ರ, ಮನೋವಿಶ್ಲೇಷಣೆ, ಚಾರಿತ್ರಿಕ ವಸ್ತು ಮೂಲವಾದದ ಹಿನ್ನೆಲೆಯಲ್ಲಿ ಚರ್ಚಿಸಲು ಏಕೆ ಪ್ರಯತ್ನಿಸಿದೆ ಎಂಬುದರ ಮೇಲೆ ಬೆಳಕು ಚೆಲ್ಲುತ್ತಾರೆ. ೭೦೫ ಪುಟಗಳ ಅನುವಾದದ ಭಾಷೆ ಹೆಚ್ಚು ಪ್ರಬುದ್ಧತೆ ಹಾಗೂ ತಾರ್ಕಿಕತೆಯನ್ನು ಹೊಂದಿದೆ. ಇದಕ್ಕಾಗಿ ಶ್ರೀಮತಿಯವರನ್ನು ನಾವು ಅಭಿನಂದಿಸಲೇಬೇಕು. ಆದರೆ ಲೆಸ್ಬಿಯಾನಿಸಂ, ಬೂರ್ಜ್ವಸಿ ಎಂಬ ಪದಗಳ ಬಳಕೆ ಓದುಗರಿಗೆ ಕಿರಿಕಿರಿಯನ್ನುಂಟು ಮಾಡುತ್ತದೆ.

ಸಿಮೊನ್ ದ ಬೊವಾರವರು ಫ್ರಾಯ್ಡ್‌ನ ಲೈಂಗಿಕವಾದ, ಏಂಗಲ್ಸ್‌ನ ಆರ್ಥಿಕವಾದ ಹೆಂಗಸಿನ ಚರಿತ್ರೆಯನ್ನು ವಿವರಿಸಲು ಅಸಮರ್ಥ ಎನ್ನುತ್ತಾರೆ. ಈಕೆಯ ಪ್ರಕಾರ ಮಾನವ ಜನಾಂಗದ ಆರ್ಥಿಕ ಚರಿತ್ರೆಯಲ್ಲಿ ಅಡಕಗೊಂಡಿರುವ ವ್ಯಕ್ತಿಯ ಸ್ವಂತಿಕೆಯ ನೆಲೆಯಲ್ಲಿ ಒಂದು ಅಸ್ತಿತ್ವವಾದದ ಬೇರಿದೆ ಎನ್ನುತ್ತಾರೆ. (ಪು. ೬೯) ಇದರ ನೆರವಿನಿಂದ ಮಾತ್ರ ಮಾನವಜೀವಿ ಎಂದು ಕರೆಯುತ್ತಿರುವ ಒಂದು ವಿಶಿಷ್ಟ ಸ್ಥಿತಿಯನ್ನು ಅರಿಯಬಲ್ಲೆವು ಎಂದೂ ಈಕೆ ಹೇಳುತ್ತಾರೆ. (ಪು. ೬೯)

ಸಿಮೊನ್ ಪ್ರಕಾರ ಪಿತೃಪ್ರಧಾನ ವ್ಯವಸ್ಥೆ ನೆಲೆಗೊಂಡದ್ದು ಆಕಸ್ಮಿಕವೂ ಅಲ್ಲ, ಹಿಂಸಾತ್ಮಕ ಕ್ರಾಂತಿಯ ಫಲವೂ ಅಲ್ಲ. ಮಾನವ ಜನಾಂಗದ ಉಗಮ ಕಾಲದಿಂದಲೂ ಗಂಡಸರಿಗಿದ್ದ ಜೈವಿಕ ನೆಲೆಯ ಮೇಲುಗೈ ಅವರಿಗೆ ಏಕೈಕ ಅಧಿಪತಿಗಳಾಗುವ ಅವಕಾಶಗಳನ್ನೊದಗಿಸಿತು. ಈ ಅವಕಾಶಗಳನ್ನೆಂದೂ ಅವರು ಬಿಟ್ಟುಕೊಟ್ಟಿಲ್ಲ. (ಪು. ೭೭)

ಮತ್ತೆ ಆಕೆ ಹೇಳುತ್ತಾರೆ :

> ಆಕೆ ದುರ್ಬಲಳೂ, ಕಡಿಮೆ ಉತ್ಪಾದಿಸುವ ಸಾಮರ್ಥ್ಯದವಳು ಎಂಬ ಸಂಗತಿಯಷ್ಟೇ ಅವಳನ್ನು ಹೀಗೆ ದೂರ ಮಾಡಲು ಕಾರಣಳಾಗಿರಲಾರವು. ಆಕೆ ಗಂಡಸು ದುಡಿಯುವ, ಆಲೋಚಿಸುವ ವಿಧಾನಕ್ಕಿಂತ ಬೇರೆಯಾಗಿದ್ದಳು. ಆಕೆ ಜೀವನದ ರಹಸ್ಯ ಚೌಕಟ್ಟಿನೊಳಗೆ ಬಂದಿಯಾಗಿದ್ದಳು. ಹೀಗಾಗಿ ಗಂಡು ಆಕೆಯನ್ನು ತನ್ನಂತೆ ಇರುವ ಜೀವವೆಂದು ಬಗೆಯಲಿಲ್ಲ. ಆಕೆ ಅನ್ಯದ ಚಹರೆಗಳನ್ನು ಹೊಂದಿದ್ದಾಳೆಂದು ಗಂಡಸಿಗೆ ತೋರಿದ್ದರಿಂದ ಅವಳನ್ನು ತನ್ನ ಜೊತೆಯಲ್ಲಿರಿಸಿಕೊಳ್ಳಲಿಲ್ಲ. ಆತನಿಗೆ ಅವಳ ಶೋಷಕನಾಗದೇ ಬೇರೆ ಮಾರ್ಗವೇ ಇರಲಿಲ್ಲ. ಗಂಡಸಿನಲ್ಲಿದ್ದ ಸಾಮರ್ಥ್ಯದ ಬಗೆಗೆ ವಿಸ್ತಾರಗೊಳ್ಳುವ ಅಪೇಕ್ಷೆ, ಹೆಂಗಸಿನ ಅಸಾಮರ್ಥ್ಯಗಳು ಇವೆರಡೂ ಕೂಡಿ ಅವಳಿಗೊಂದು ಶಾಪವಾಗುವಂತೆ ಮಾಡಿದವು. (ಪು. ೭೯)



**ದ ಸೆಕೆಂಡ್ ಸೆಕ್ಸ್**
ಲೇ: ಸಿಮೊನ್ ದ ಬೊವಾ
ಅನು: ಡಾ. ಎಚ್.ಎಸ್. ಶ್ರೀಮತಿ
ಪ್ರ: ಅಧ್ಯಯನ ಮಂಡಲ-ಕಾವ್ಯಮಂಡಲ, ೧೩/೭೫, ಆರ್.ವಿ. ರಸ್ತೆ, ಬಸವನಗುಡಿ
ಬೆಂಗಳೂರು - ೫೬೦ ೦೦೪
ಮೊ.ಮು.: ೨೦೦೭
ಬೆಲೆ : ರೂ. ೪೦೦/-

ಹೀಗೆ ಸಿಮೊನ್ ದ ಬೊವಾರವರು ಹೆಣ್ಣಿನ ಮೇಲೆ ಗಂಡು ಅಧಿಕಾರ ಸ್ಥಾಪಿಸಿದ್ದು, ಪಿತೃಪ್ರಧಾನ ವ್ಯವಸ್ಥೆ ಜಾರಿಗೆ ಬಂದಿರಬಹುದಾದ ಸಂದರ್ಭವನ್ನು ಅರ್ಥೈಸುತ್ತಾರೆ. ಖಾಸಗಿ ಆಸ್ತಿಯ ಕಲ್ಪನೆಯ ಉಗಮವೇ ಹೆಣ್ಣಿನ ಶೋಷಣೆಗೆ ಚಾರಿತ್ರಿಕ ಬಿಂದು ಎನ್ನುವ ಮಾರ್ಕ್ಸ್‌ವಾದಿ

ತಾತ್ವಿಕತೆಯಿಂದ ಭಿನ್ನವಾದ ನಿಲುವು ಇದು. ಸ್ವಂತಿಕೆಯ ನೆಲೆಯ ಅಸ್ತಿತ್ವವಾದದ ಬೇರಿನಲ್ಲಿಯೇ ಇವರು ಶೋಷಣೆ ಹಾಗೂ ಬಿಡುಗಡೆ - ಇವೆರಡರ ಹಾದಿಗಳನ್ನೂ ಹುಡುಕುತ್ತಾರೆ. ಹೆಂಗಸಿನ ಅಂದು ಇಂದಿನ ಬದುಕನ್ನು ಕುರಿತು ಬರೆಯುವ ಇವರ ಆಲೋಚನೆಗಳಲ್ಲಿ ಈ ಮೇಲಿನ ತಾತ್ವಿಕತೆಯೇ ಕೆಲಸ ಮಾಡಿರುವುದನ್ನು ನಾವು ಗಮನಿಸಬಹುದು. ವಾಸ್ತವಗಳು ಮತ್ತು ಮಿಥ್‌ಗಳು, ಚರಿತ್ರೆ – ಪುರಾಣಗಳು, ಹೆಂಗಸಿನ ಬದುಕು, ಪರಿಸ್ಥಿತಿ, ಸಮರ್ಥನೆಗಳು, ಬಿಡುಗಡೆಯತ್ತ ಎಲ್ಲಾ ಭಾಗಗಳ ವಿವರಣೆಗಳು ಅದ್ಭುತವಾದ ಒಂದು ಅರ್ಥವನ್ನು ವಿವರಣೆಯ ಹಂತದಲ್ಲಿ ನೀಡುತ್ತವೆ. ಎಷ್ಟೋ ವಿಚಾರಗಳನ್ನು ನಮ್ಮ ಮನಸ್ಸಿನಲ್ಲಿ ದಾಖಲಿಸುತ್ತವೆ. ಹೊಸ ವಿಚಾರಗಳು ನಮ್ಮ ಮನಸ್ಸಿಗೆ ತಾಕುತ್ತವೆ. ಆದರೆ ಇವೆಲ್ಲವನ್ನು ಒಂದು ಬಿಗಿಯಾದ ಬಂಧದಲ್ಲಿ, ತಾತ್ವಿಕತೆಯಲ್ಲಿ, ದಾರ್ಶನಿಕತೆಯ ರೂಪದಲ್ಲಿ ಕಟ್ಟಿಕೊಡಲಾಗಿಲ್ಲ ಎನ್ನುವ ಕೊರತೆ ನಮ್ಮ ಮನಸ್ಸಿಗೆ ಭಾಸವಾಗುತ್ತದೆ. ಅದಾಗ್ಯೂ ಅರ್ಥೈಸುವಿಕೆಯ ಹಂತದ ಓದಿಗೆ ಈ ಪುಸ್ತಕ ಒಂದು ಆಕರ ಎಂದು ಹೇಳಬಹುದು. ಹಾಗಾಗಿ ಶ್ರೀಮತಿಯವರ ಕೆಲಸ ಶ್ಲಾಘನೀಯ.

* * *

ಕೃತಿ ಪ್ರವೇಶದ ಮೊದಲಿಗೆ **'ಕನ್ನಡ ಓದಿಗೆ ಮೊದಲು'** - ಬರೆದಿರುವ ಕೆ.ವಿ. ನಾರಾಯಣ್ ಅಸ್ತಿತ್ವವಾದದ ಪರಿಕಲ್ಪನೆಯನ್ನು ವಿವರಿಸುತ್ತಾರೆ. ಪ್ರಜ್ಞೆ ಹಾಗೂ ಸ್ವಾತಂತ್ರ್ಯದ ಆಯ್ಕೆ. ಸ್ವಾತಂತ್ರ್ಯದ ಆಯ್ಕೆ ಹೊಣೆಗಾರಿಕೆಯದು. ಆಗುವಿಕೆ, ಮೀರುವಿಕೆ ಅಸ್ತಿತ್ವವಾದದ ಪ್ರಮುಖ ಚಿಂತನಾ ನೆಲೆಗಳೆಂದು ಗುರುತಿಸುವ ಕೆ.ವಿ.ಎನ್. ಕನ್ನಡದ ಚಿಂತನೆಯ ಮಟ್ಟಿಗೆ ಸಿಮೊನ್ ದ ಬೊವಾರವರ ವಿಚಾರಗಳು ಹೊಸದಿಕ್ಕು ತೆರೆಯಬಲ್ಲವು ಎನ್ನುತ್ತಾರೆ.

ಅಧಿಕಾರ, ಶೋಷಿತ ನೆಲೆಯ ಸ್ತ್ರೀವಾದಿ ಗ್ರಹಿಕೆ-ಸ್ಥಗಿತ ನೆಲೆಯಲ್ಲಿದೆ ಎನ್ನುವ ಇವರು 'ಹೆಂಗಸು ಸ್ವಾತಂತ್ರ್ಯದ ಅವಕಾಶಗಳನ್ನು ಪಡೆಯದಂತೆ ನೋಡಿಕೊಂಡ ಗಂಡಸಿಗೆ ಅಪರಮಿತವಾದ ಸ್ವಾತಂತ್ರ್ಯ ದೊರಕುತ್ತದೆಂದು ಯೋಚಿಸುವುದು ಸರಿಯಲ್ಲ. ಹೆಂಗಸಿನ ಈ ಬಂಧಿತ ಸ್ಥಿತಿಯಿಂದಾಗಿ ಗಂಡಸೂ ಅಪರಿಪೂರ್ಣನಾಗಿ ಉಳಿಯುತ್ತಾನೆ. ಈ ತಿಳಿವಳಿಕೆ ಅಗತ್ಯವಾಗಿದೆ. ಸಿಮೊನ್ ದ ಬೊವಾ ಅವರು ಅಸ್ತಿತ್ವವಾದಿ ಚಿಂತನೆಗಳ ನೆಲೆಗಟ್ಟಿನಲ್ಲಿ ಗಂಡಸಿನ ಈ ಊನತೆಯನ್ನು ಸರಿಯಾಗಿಯೇ ಗುರುತಿಸುತ್ತಾರೆ. ಮೇಲುನೋಟಕ್ಕೆ ಈ ವಿಶ್ಲೇಷಣೆ ಪುರುಷನಿಗೆ ವಿನಾಯಿತಿಗಳನ್ನು ನೀಡುವಂತೆ ತೋರುತ್ತದೆ. ಹಾಗೆಯೇ ಈವರೆಗೆ ಸಂಬಂಧಿಸಿರುವ ಏರುಪೇರುಗಳ ಹೊಣೆಯಿಂದ ಪುರುಷನನ್ನು ಬಿಡುಗಡೆ ಮಾಡುವಂತೆ ಕಾಣುತ್ತದೆ. (ಪು. ೪೯).

ಈ ಚಿಂತನೆಯಲ್ಲಿ ಬೌದ್ಧಿಕ ನೆಲೆಯ ಸ್ತರಗಳನ್ನು ಗುರುತಿಸಬಹುದೇ ಹೊರತು-ವಾಸ್ತವದ ನೆಲೆಯ ಬದುಕನ್ನಲ್ಲ. ಬಹುಶಃ ಸಿಮೊನ್ ಮಧ್ಯಮವರ್ಗದವರನ್ನು ಗಮನದಲ್ಲಿಟ್ಟುಕೊಂಡು ಬರೆದರು ಎನ್ನುವ ಟೀಕೆ ಎದುರಿಸಿದ್ದು ಈ ಕಾರಣದಿಂದಾಗಿಯೂ ಇರಬಹುದು. ವ್ಯಕ್ತಿಗತ ನೆಲೆಯಲ್ಲಿ ಪ್ರಜ್ಞೆ, ಆಗುವಿಕೆ, ಮೀರುವಿಕೆ ಕುರಿತು ಮಾತನಾಡುವ ಅಸ್ತಿತ್ವವಾದ ಸಾಮುದಾಯಿಕ ಸ್ತರಗಳ ತಲ್ಲಣಗಳ ಹಿನ್ನಲೆಯನ್ನು ಗುರುತಿಸುತ್ತದೆ. ಆದರೆ ಮೀರುವಿಕೆ, ಆಗುವಿಕೆಯನ್ನು ವ್ಯಕ್ತಿಗತ ನೆಲೆಯಲ್ಲಿ ಇರುವಂತೆ ಕಾಣುತ್ತದೆ. ಹೋರಾಟದ ಬದುಕಿಗೆ ವ್ಯಕ್ತಿಗತ ಪ್ರಜ್ಞೆಯನ್ನು ಮುಂದುಮಾಡುತ್ತದೆ. ವ್ಯಕ್ತಿ-ಸಮುದಾಯ ಎರಡೂ ಚಿಂತನೆಗಳನ್ನು ಒಟ್ಟಿಗೆ ರೂಢಿಸಿಕೊಂಡು ನೋಡುವ ಒಳನೋಟಗಳು ಮಾತ್ರ-ಚಳವಳಿಗೆ, ಹೋರಾಟಗಳಿಗೆ ಇಂದು ಒಂದು ಅರ್ಥ ಕೊಡಬಹುದಾಗಿದೆ. ಕ್ಲಾರಾ ಜಡ್‌ಕಿನ್ನಳು ಲೆನಿನ್ ಜೊತೆಗೆ ಜಗಳವಾಡಿ ಮಹಿಳಾ ಸಂಘಟನೆಯನ್ನು ಸ್ಥಾಪಿಸಿದ ಹಿನ್ನೆಲೆಯಲ್ಲಿ ಸಾಂಪ್ರದಾಯಿಕ ಮಾರ್ಕ್ಸ್‌ವಾದಿ ದೃಷ್ಟಿಕೋನವನ್ನು ಮೀರಿದ ತಾತ್ವಿಕತೆಯ ಚಿಂತನೆ ಇತ್ತು. ಸಾಮುದಾಯಿಕ ನೆಲೆ - ವ್ಯಕ್ತಿಗತ ನೆಲೆಯ ಸಂಘರ್ಷಗಳಲ್ಲಿ - ಒಂದು ಇನ್ನೊಂದಕ್ಕೆ ಪೂರಕವಾಗುವ ಚಿಂತನೆ ನಮಗಿಂದು ಅಗತ್ಯ. ಇಲ್ಲದಿದ್ದರೆ ವ್ಯಕ್ತಿಗತ ನೆಲೆಯ ಮೇಲೆ, ಪ್ರಜ್ಞೆಯ ಮೇಲೆ ಬಳಸುವ ಒತ್ತು - ಇಂದಿನ ಜಾಗತೀಕರಣದ ಸ್ಥಿತಿಯಲ್ಲಿ - ಮಹಿಳೆಯರು ಏಕಾಂಗಿಗಳಾಗಿ ಅವರವರ ಮಟ್ಟಕ್ಕೆ ಹೋರಾಟ ಮಾಡುವುದನ್ನು ಪ್ರೋತ್ಸಾಹಿಸಿದಂತಾಗುತ್ತದೆ.

ಎಚ್.ಎಸ್. ಶ್ರೀಮತಿಯವರು ಬರೆಯುತ್ತಾರೆ :

> ಬಂಧನ, ಬಿಡುಗಡೆಯನ್ನು ಸ್ವಂತದ ಹೊಣೆ ಎಂಬ ನೆಲೆಯಿಂದ ಅಸ್ತಿತ್ವವಾದ ಉತ್ತರಿಸುತ್ತದೆ..... ನಮ್ಮ ಬದುಕಿನ ಹೊಣೆಯನ್ನು ಇಡಿಯಾಗಿ ಹೊರಗೆಲ್ಲೋ ದಾಟಿಸುವ ಮೂಲಕ ಜಡವಾದ ನಿಷ್ಕ್ರಿಯ ಬದುಕನ್ನು ನಡೆಸುತ್ತಾ ಬಂದ ನಿರಾಳತೆಗೆ ಇನ್ನು ಅವಕಾಶವಿಲ್ಲ. ಜಾಗೃತವಾಗುವುದು, ಕ್ರಿಯಾಶೀಲವಾಗುವುದು ಎಂದರೆ ಯಾವ ಸಬೂಬುಗಳನ್ನೂ ಹೇಳದೆ ನಿಜವಾಗಿ ಕೆಲಸಕ್ಕೆ ತೊಡಗಿಸಬೇಕು. ಕಷ್ಟದ ಈ ಹೊರೆಯನ್ನು ಹೊರಲು ಸಿದ್ಧವಿಲ್ಲದ ಜೀವಗಳು 'ಬಂಧನ'ದ ಒರತೆಯನ್ನು ಒಪ್ಪಿಕೊಂಡು ಬಿಡುತ್ತವೆ ಅಷ್ಟೇ.... (ಪು. ೫೪)

ಇವರ ಆಲೋಚನೆಗಳನ್ನು ನಮ್ಮ ಚಳವಳಿಯ ಹಂದರದಲ್ಲಿ ಇಟ್ಟು ನೋಡೋಣ. ವಚನ ಚಳವಳಿಯಾಗಬಹುದು, ದಂಡಿ ಸತ್ಯಾಗ್ರಹವಾಗಬಹುದು, ಹಿಂಸೆ, ವರದಕ್ಷಿಣೆ, ಕೌಟುಂಬಿಕ ದೌರ್ಜನ್ಯ, ಕೋಮುವಾದ ಕುರಿತಾದ ಮಹಿಳಾ ಚಳವಳಿಯಾಗಬಹುದು. ಇವುಗಳೆಲ್ಲ collective conciousness ದಿಂದಲೇ ನಡೆದಂತಹವುಗಳು. ಈ ಕಲೆಕ್ಟೀವ್ ಹೊಣೆಗಾರಿಕೆಯು ಒಬ್ಬ ವ್ಯಕ್ತಿಯ ಹೊಣೆಗಾರಿಕೆಗಿಂತ ಮುಖ್ಯವಾದುದು, ಹೆಚ್ಚು ಮಹತ್ವವಾದುದು. ಹಾಗಾಗಿ ಸ್ವಾಯತ್ತ ಮಹಿಳಾ ಚಳವಳಿ collective consciousnessಗೆ ಹೆಚ್ಚಿನ ಪ್ರಾಧಾನ್ಯ ನೀಡುತ್ತದೆ. ಈ ನೆಲೆಯಲ್ಲಿಯೇ ಹೋರಾಟಗಳು ರೂಪುಗೊಳ್ಳುತ್ತವೆ. ಈ ಸಂದರ್ಭದಲ್ಲಿ ವ್ಯಕ್ತಿಗತ ಹೋರಾಟ ಸಮುದಾಯದಲ್ಲಿ, ಸಾಮುದಾಯಿಕ ಹೋರಾಟ ವ್ಯಕ್ತಿಯಲ್ಲಿ ಚಲನಶೀಲತೆ ಉಂಟುಮಾಡುವುದೇ ಪರಸ್ಪರರ ಕೊಡು-ಕೊಳ್ಳುವಿಕೆಯ ಅರ್ಥಪೂರ್ಣತೆಯಲ್ಲಿ ಹೋರಾಟಕ್ಕೂ ಒಂದು ವಿಶಾಲ ಚೌಕಟ್ಟು ಸಿಗುತ್ತಿದೆ.

> ಹೆಂಗಸಿನ ಬಗ್ಗೆ ಗಂಡಸು ಬರೆದಿರುವುದನ್ನೆಲ್ಲ ಸಂದೇಹದಿಂದಲೇ ನೋಡಬೇಕು. ಏಕೆಂದರೆ, ಗಂಡಸು ಏಕಕಾಲಕ್ಕೆ ಪ್ರತಿವಾದಿಯಾಗಿರುವಂತೆ ನ್ಯಾಯಾಧೀಶನೂ ಆಗಿದ್ದಾನೆ.
>
> ***– ಪೌಲಿನ್ ದ ಲಾ ಬಾರ್***
>
> * * *
>
> ಹೆಂಗಸರಲ್ಲಿ ಅತ್ಯಂತ ಪ್ರತಿಭಾವಂತರೆಂದು ಕೊಂಡವರ ಮಾತುಗಳನ್ನು ಕೂಡ ನಾವು ವಿನಯಭರಿತವಾಗಿ ಕೇಳುತ್ತೇವಾದರೂ, ಅವೆಲ್ಲವೂ ನಮ್ಮಿಂದ ಬಂದ ವಿಚಾರಗಳೇ ಆಕೆಯಲ್ಲಿ ಬಿಂಬಿತವಾಗಿವೆ ಎಂದು ನಮಗೆ ಗೊತ್ತಿರುತ್ತವೆ.
>
> ***- ಕ್ಲಾಡ್ ಮೇರಿಯ***

ಈವರೆಗೆ ಮಹಿಳೆಗೆ ಎರಡನೆಯ ದರ್ಜೆಯು ಪ್ರಾಪ್ತವಾಗಿರುವಿಕೆಯ ವ್ಯಾಖ್ಯಾನಿಸುವುದರಲ್ಲಿ ಹಲವಾರು ಭ್ರಮೆ ಸೃಷ್ಟಿಸಿಕೊಂಡಿದ್ದೇವೆ ಎಂದು ಎಚ್.ಎಸ್. ಶ್ರೀಮತಿಯವರು ಬರೆಯುತ್ತಾರೆ : "......ಗಂಡು ಹೆಣ್ಣುಗಳ ಸಂಬಂಧಿತ ಸ್ವರೂಪದಲ್ಲಿ ವ್ಯತ್ಯಾಸ ವಾದರೆ ಸಮಾನತೆ ಎಂಬ ಮಾಂತ್ರಿಕತೆ ಸಾಧ್ಯವಾದೀತು ಎಂದು ಚಿಂತಿಸುತ್ತಿದ್ದೇವೆ. ಗಂಡಿನ ಸಂಬಂಧಕ್ಕೆ ಮಾತ್ರವೇ ಕಟ್ಟುಬಿದ್ದಿರು ವುದೇ ಆಕೆಯ ಅಧೀನ ಸ್ಥಿತಿಗೆ ಮುಖ್ಯ ಕಾರಣ. ಇಂಥದೊಂದು ಸನ್ನಿವೇಶಕ್ಕೆ ಬದ್ಧಳಾದ ಹೆಣ್ಣಿನ ಬದುಕು ನಿತ್ಯಾವರ್ತಕ್ಕೆ ಬದ್ಧಳಾಗಲೇಬೇಕಾದ ಇಕ್ಕಟ್ಟಿಗೆ ಸಿಲುಕಿಬಿಟ್ಟಿದೆ. ಈ ಸನ್ನಿವೇಶ ಬದಲಾದ ಹೊರತು ಅವಳಿಗೆ ನಿತ್ಯಾವರ್ತದ ನಿಲುಗಡೆಯ ನಿಷ್ಕ್ರಿಯತೆಯಿಂದ ಮುಕ್ತಿಯಿಲ್ಲ. ಆದರೆ ಈ ಸನ್ನಿವೇಶ ಬದಲಾಗುವು ದಕ್ಕೆ ಹೊರಗಿನ ದೈವವೊಂದನ್ನು ಕಾಯುತ್ತಾ ಕೂತರೆ ಅರ್ಥವಿಲ್ಲ. ನಮ್ಮ ಸ್ತ್ರೀವಾದಿ ಚಿಂತನೆಗಳು ಸಮಾಜವು ಬದಲಾಗಬೇಕು, ಸುಧಾರಿಸಬೇಕು ಎಂಬುದನ್ನು ಪದೇಪದೆ ಜಪ ಮಾಡುತ್ತವೆ ನಿಜ. ಇದು ಸ್ಥಾಪಿತವಾಗುವುದು ಹೇಗೆ ಎಂಬ ಕ್ರಿಯಾ ಯೋಜನೆ ಇಲ್ಲದಿದ್ದರೆ 'ಹುಚ್ಚು ಬಿಡದ ಹೊರತು ಮದುವೆಯಾಗದು, ಮದುವೆಯಾಗದ ಹೊರತು ಹುಚ್ಚುಬಿಡದು' ಎಂಬ ಗಾದೆಯಂತೆ ವಿಷ ವರ್ತುಲವೊಂದು ನಿಯತವಾಗಿ ಬಿಡುತ್ತದೆ. ಹೆಣ್ಣು ಇದರ ಹೊಣೆಯನ್ನು ತಾನೇ ಹೊರಲು ಸಿದ್ಧಗೊಂಡ ಹೊರತು ಬಿಡುಗಡೆಯ ಹಾದಿ ಕಾಣಲಾಗದು...." (ಪು. ೫೪-೫೫)

> ಶ್ರೇಷ್ಠ ತತ್ವವೊಂದಿದೆ. ಅದು ವ್ಯವಸ್ಥೆಯನ್ನು, ಬೆಳಕನ್ನು, ಗಂಡಸನ್ನು ಸೃಷ್ಟಿಸಿದೆ. ಅಧಮ ತತ್ವವೊಂದಿದೆಅದು ಅವ್ಯವಸ್ಥೆಯನ್ನು, ಕತ್ತಲನ್ನೂ, ಮತ್ತು ಹೆಂಗಸನ್ನು ಸೃಷ್ಟಿಸಿದೆ.
>
> *- ಪೈಥಾಗೊರಸ್*
>
> * * *
>
> ಒಂದು ಲಿಂಗ ಸಮೂಹವನ್ನು ಇನ್ನೊಂದು ಲಿಂಗ ಸಮೂಹಕ್ಕೆ ಅಧೀನಗೊಳಿಸುವ ಸಾಮಾಜಿಕ ಪದ್ಧತಿ ತಂತಾನೇ ಕೆಟ್ಟದ್ದು. ಇದು ಮಾನವ ಪ್ರಗತಿಗೆ ಹಾಕಿದ ಮುಖ್ಯ ತಡೆಯಾಗಿದೆ. ಎರಡು ಲಿಂಗ ಸಮೂಹಗಳು ಸಮಾನ ಅವಕಾಶಗಳನ್ನು ಪಡೆಯಬೇಕೆಂದು ನಾನು ನಂಬಿದ್ದೇನೆ.
>
> *– ಜಾನ್ ಸ್ಟುವರ್ಟ್ ಮಿಲ್*

ಶ್ರೀಮತಿಯವರ ಚಳವಳಿಯ ಹಾಗೂ ಕಲೆಕ್ಟೀವ್ ಪ್ರಜ್ಞೆಯ ಅನನುಭವ ಇಲ್ಲಿ ನಿಚ್ಚಳವಾಗಿ ಕಾಣುತ್ತಿದೆ. ಬಿಡುಗಡೆಯ ಹಾದಿಯ ಹೊಣೆಯನ್ನು ಹೊತ್ತೇ ಸ್ವಾಯತ್ತ ಮಹಿಳಾ ಸಂಘಟನೆಗಳು ಭಾರತದಲ್ಲಿ ಅಸ್ತಿತ್ವಕ್ಕೆ ಬಂದವು. ಈ ಹೊಣೆ ಸುಲಭದ್ದಲ್ಲ. ಆದರೂ ಬಂಧನ, ಬಿಡುಗಡೆಯ ಪ್ರಾಥಮಿಕ ಹಂತದ ಹೋರಾಟಗಳಲ್ಲೇ ನಲುಗಿ ಹೋಗಿರುವ, ಸಾವನ್ನಪ್ಪಿರುವ ಸಾವಿರಾರು ಮಹಿಳೆಯರ ಕಥೆಗಳು ನಮ್ಮ ಮುಂದಿವೆ. ಇದರಲ್ಲಿ ಮದ್ಯಮವರ್ಗದವರಿದ್ದಾರೆ, ದಲಿತ ಮಹಿಳೆಯರಿದ್ದಾರೆ, ವೇಶ್ಯೆಯರಿದ್ದಾರೆ, ಕೂಲಿ ಕಾರ್ಮಿಕ ಹೆಂಗಸರಿದ್ದಾರೆ. ಆಂಧ್ರಪ್ರದೇಶದ ತೆಲಂಗಾಣ ಹೋರಾಟದ ಮಹಿಳೆಯರ ಕಥೆಗಳು ನಮ್ಮ ಮುಂದಿವೆ. ಗುಜರಾತಿನಲ್ಲಿ ಕೋಮುವಾದಿಗಳ ಹಿಂಸೆಗೊಳಗಾಗಿ ದಹನ ವಾದ ಮಹಿಳೆಯರ ಕಥೆಗಳು ನಮ್ಮ ಮುಂದಿವೆ. ಇಲ್ಲಿ ಯಾರ ಪ್ರಜ್ಞೆ? ಯಾರ ಸ್ವಾತಂತ್ರ್ಯ, ಹೊಣೆಗಾರಿಕೆಯದಾಗುತ್ತದೆ? ಯಾವ ಆಯ್ಕೆಗಳಿವೆ? ಇಂದಿನ ಜಾಗತೀಕರಣದಲ್ಲಿ ರೈತನಿಗೆ ಯಾವ ಆಯ್ಕೆಯಿದೆ? ಯಾವುದೇ ಚಳವಳಿ ಸಮುದಾಯದ ಪ್ರಜ್ಞೆಯ ಮೇಲೆ ಸಕಾರಾತ್ಮಕ ಪರಿಣಾಮ ಬೀರಿದಂತೆ ವ್ಯಕ್ತಿಯ ಪ್ರಜ್ಞೆಯ ಮೇಲೂ ಬೀರುತ್ತದೆ. ಹಾಗಿಲ್ಲದೇ ವ್ಯಕ್ತಿಯ ಪ್ರಜ್ಞೆಯ ಮೇಲಷ್ಟೇ ಒತ್ತುಬೀಳುವ ವ್ಯಕ್ತಿಗತ ನೆಲೆಯ ಹೋರಾಟ ನಮ್ಮನೆಲ್ಲಿಗೂ ಕರೆದೊಯ್ಯಲಾರದು ಎಂಬ ಅರಿವು ನಮಗಿರಬೇಕು. ನಿಜ, ವೈಯಕ್ತಿಕ ವಾಗಿ ಗಟ್ಟಿಗೊಳ್ಳುವ ನೆಲೆಯಲ್ಲಿ ಸಿಮೊನ್ ದ ಬೊವಾರವರು ಹೇಳುವ ಪ್ರಜ್ಞೆ, ಆಗುವಿಕೆ, ಮೀರುವಿಕೆಯ ಮಾದರಿಗಳನ್ನು ಸ್ವೀಕರಿಸುತ್ತಲೇ ಸಾಮುದಾಯಿಕ ನೆಲೆಗಳಲ್ಲಿ ಗುರುತಿಸಿಕೊಳ್ಳುವುದು, ಕಲೆಕ್ಟೀವ್ ಪ್ರಜ್ಞೆಗೆ ತಯಾರಾಗುವುದು, ಕಲೆಕ್ಟೀವ್ ಆಯಾಮಗಳನ್ನು ಹುಟ್ಟುಹಾಕಿರುವುದು ಇಂತಹ ಮಾದರಿಗಳನ್ನು ಈಗಾಗಲೇ ಸ್ವೀಕರಿಸಿ ಮಹಿಳಾ ಚಳವಳಿಗಳು ಹೋರಾಟ ನಡೆಸಿವೆ, ನಡೆಸುತ್ತಾ ಇವೆ; ಕನ್ನಡ ಸಾಹಿತ್ಯದಲ್ಲಿ ಕೂಡಾ ಇಂತಹ ಚಿಂತನೆಗಳ ಹುಡುಕಾಟಗಳು ಕೂಡಾ ಈಗಾಗಲೇ ನಡೆದಿವೆ ಎಂಬುದನ್ನು ಪ್ರಗತಿಪರ, ನವ್ಯ ಲೇಖಕರ ಬರಹಗಳನ್ನು ಅವಲೋಕಿಸಿ ದಾಗ ಹಾಗೂ ದಲಿತ, ಮಹಿಳಾ ಲೇಖಕರನ್ನು ಗಮನಿಸಿದಾಗ ನಮಗೆ ಅರ್ಥವಾಗುತ್ತದೆ.

ಜಾಗತೀಕರಣದ ಸಂದರ್ಭದಲ್ಲಿ ಸಮಸ್ಯೆಗಳು ಗೋಜಲಾಗುತ್ತಿವೆ, ಸಂಕೀರ್ಣವಾಗುತ್ತಿವೆ. ಮಹಿಳಾ ಹೋರಾಟಗಳ ನೆಲೆಗಳು ಬಿನ್ನವಾಗುತ್ತಿವೆ. ಹಾಗಾಗಿ 'ದ ಸೆಕೆಂಡ್ ಸೆಕ್ಸ್'ನ ವಿಶ್ಲೇಷಣೆ ಪ್ರಸ್ತುತ ವಾತಾವರಣದ ಹಿನ್ನೆಲೆಯಲ್ಲಿ ನಡೆಯುವುದು ಮುಖ್ಯವಾಗುತ್ತದೆ.

■

*'ನಮ್ಮ ಮಾನಸ'ದ ಪ್ರತಿಗಳನ್ನು ಕಂಡು ಖುಷಿಯಾಯಿತು. ಮತ್ತೆ ಸುರು ಮಾಡಿದ ಮಾನಸ (ಮತ್ತೆ ಬಂದ ಮಾನಸ)ಕ್ಕಾಗಿ ತುಂಬ ಶುಭಾಶಯಗಳು. ಮಾನಸದಲ್ಲಿಯ 'ಸಂವಾದ' ಬರಹಗಳನ್ನು ಓದಿದರೆ ಬರವಣಿಗೆಯ ಮೂಲಭೂತ ತತ್ತ್ವಗಳ ಕುರಿತೇ ಚಿಂತಿಸಬೇಕಾಗುತ್ತದೆ. ನನಗೆ ಕಂಡಂತೆ, ನನ್ನ ಕಂಠ ಹೇಗಿದೆಯೋ ಹಾಗೆ ಬರೆಯುವುದು, ಹಾಡುವುದು ಹೊರತು - ಹೀಗೇ ಅಂತ ಹೊರಟರೆ ನಾನು ಕೃತಕವಾಗುತ್ತೇನೆ. ಆದೇಶದ ಬೀಜ ಒಳಗಿಟ್ಟುಕೊಂಡ ಚಿಂತನೆ ನನ್ನೊಡನೆ ಮಾತಾಡೋದಿಲ್ಲ.... ಅದು ನನ್ನ ಮಿತಿ ಅಂತ ಗ್ರಹಿಸಿದರೆ, ಸರಿ, ನಾನು ಮಿತಿಯುಳ್ಳವಳು. (ಮಿತಿಯಿಲ್ಲದವರ ಮನೆಯಿಂದ ಸಾಸಿವೆ ತಂದು ತೋರಿಸು ಎನ್ನಬಹುದು ಅಲ್ಲವೆ?) ಏನಾದರೂ ಬರೆದರೆ ಕಳಿಸುತ್ತೇನೆ. ಮಾನಸದ ಎಲ್ಲರಿಗೂ ನನ್ನ ನೆನಪು ತಿಳಿಸಿ.*

*-ವೈದೇಹಿ, ಮಣಿಪಾಲ*

ಸಂವಾದ

# ಮಹಿಳಾ ಸಾಹಿತ್ಯದಲ್ಲಿ 'ಮಾದರಿ'ಗಳು

*ಸಂವಾದ-1*

## ಮೂಲಮಾದರಿ ಎಂದರೇನು ?

• *ಎಂ.ಉಷಾ*

**ಕ**ಳೆದ ಸಂಚಿಕೆಗಳಲ್ಲಿ ಪ್ರಕಟಗೊಂಡಿರುವ ಸ್ತ್ರೀಸಾಹಿತ್ಯದಲ್ಲಿ 'ಮಾದರಿ'ಗಳು ಎಂಬ ಸಂವಾದ ಕುತೂಹಲಕಾರಿಯಾಗಿದೆ. ಸಂವಾದಕ್ಕೆ ಅವಕಾಶ ಕಲ್ಪಿಸಿಕೊಟ್ಟಿರುವ ಕೆ.ಸತ್ಯನಾರಾಯಣ ಅವರ ಬರಹ ಹಾಗು ಅದಕ್ಕೆ ಬಂದಿರುವ ಪ್ರತಿಕ್ರಿಯೆಗಳನ್ನು ಗಮನದಲ್ಲಿಟ್ಟುಕೊಂಡು ಒಂದೆರಡು ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಲು ಬಯಸುತ್ತೇನೆ.

ಸತ್ಯನಾರಾಯಣ ಅವರ ಲೇಖನದ 'ಇಪ್ಪತ್ತನೆಯ ಶತಮಾನವು ಮುಗಿಯಿತು' ಎನ್ನುವಂತಹ ಆರಂಭಿಕ ಮಾತುಗಳೇ ಅವರ ಸರಳರೇಖಾತ್ಮಕವಾದ ವಾದಸರಣಿಯನ್ನು ಪ್ರತಿನಿಧಿಸುತ್ತದೆ. ವಾಸ್ತವವಾಗಿ ಕನ್ನಡ ಸಾಹಿತ್ಯದಲ್ಲಿ ಮಾದರಿಗಳನ್ನು ನಿರ್ಮಾಣ ಮಾಡಿರುವವರು ವಿಮರ್ಶಕರೇ ಹೊರತು ಸಾಹಿತ್ಯ ಕೃತಿ ರಚನೆಕಾರರಲ್ಲ. ಕುವೆಂಪು, ಕಾರಂತ ಮತ್ತು ತ್ರಿವೇಣಿ ಮುಂತಾದವರನ್ನು ಮಾದರಿ ನಿರ್ಮಾಣಕಾರರೆಂದು, ಹೂವಯ್ಯ, ಲಚ್ಚ, ಗುತ್ತಿ, ರಾಮ ಮುಂತಾದವರನ್ನು ಮಾದರಿ ಪಾತ್ರಗಳೆಂದು ಪ್ರಮೇಯ ಮಂಡಿಸಿದ್ದು ವಿಮರ್ಶೆ. ಆದ್ದರಿಂದ ಈ ಪ್ರಶ್ನೆಗೂ ಸಾಹಿತ್ಯಕೃತಿ ರಚನೆಕಾರರಿಗೂ ನೇರ ಸಂಬಂಧವಿಲ್ಲ. ಅಂತೆಯೇ ಸ್ತ್ರೀವಾದಿ ವಿಮರ್ಶೆಗಳು ಈ ಬಗೆಯ ವಿಮರ್ಶೆಯ ಹಿಂದಿನ ರಾಜಕಾರಣದ ಬಗ್ಗೆ, ಅದರ ತಾತ್ವಿಕತೆ ಮತ್ತು ವೈಧಾನಿಕತೆಯ ಬಗ್ಗೆ ಈಗಾಗಲೇ ಹಲವು ಪ್ರಶ್ನೆಗಳನ್ನು ಎತ್ತಿವೆ. ವಾಗ್ವಾದಗಳು ನಡೆದಿವೆ. ಇಲ್ಲಿ ಬಂದಿರುವ ಪ್ರತಿಕ್ರಿಯೆಯ ಬರಹಗಳು ಈ ವಿಚಾರವನ್ನು ಮರುಮಂಡಿಸುವ, ನೆನಪಿಸುವ ಪ್ರಯತ್ನ ಮಾಡುತ್ತಿವೆ. 'ಮಾದರಿ' ನಿರ್ಮಾಣವಾಗಿಲ್ಲ ಎಂಬ ವಾದಕ್ಕೆ ಪ್ರತಿಯಾಗಿ 'ಮಾದರಿಗಳು ಬೇಕಿಲ್ಲ'; 'ಮಾದರಿಗಳಿವೆ' ಅದನ್ನು ಗುರುತಿಸುತ್ತಿಲ್ಲ. 'ಪಕ್ವಗೊಂಡಾಗ ಮಾದರಿಗಳು ನಿರ್ಮಾಣವಾಗುತ್ತವೆ' ಎಂಬ ನಿಲುವುಗಳು ಈ ಪ್ರತಿಕ್ರಿಯೆಗಳದ್ದಾಗಿವೆ. ಈ ಅಭಿಪ್ರಾಯಗಳು ಇದುವರೆಗಿನ ಸ್ತ್ರೀವಾದಿ ವಿಮರ್ಶೆಯು ಕೈಗೊಂಡಿರುವ ಮಾದರಿ ನಿರ್ಮಾಣದ ಕೆಲಸ ಹಾಗೂ ಮಾದರಿ ನಿರ್ಮಾಣದ ವಿಮರ್ಶೆಯ ಮಾದರಿಯನ್ನೇ ನಿರಾಕರಿಸುವ ಕೆಲಸ- ಎರಡನ್ನೂ ಪ್ರತಿನಿಧಿಸುತ್ತವೆ. ಇಷ್ಟಾಗಿಯೂ ಕನ್ನಡದ ವಿಮರ್ಶೆ ಮತ್ತು ಸ್ತ್ರೀವಾದಿ ವಿಮರ್ಶೆಗಳ ನಡುವಿನ ಇದುವರೆಗಿನ ಸಂಬಂಧವನ್ನು ವಿವರಿಸಿಕೊಳ್ಳುವುದು ಜಟಿಲ ಮತ್ತು ಅದನ್ನು ಅರ್ಥಮಾಡಿಕೊಳ್ಳುವಲ್ಲಿ ಈ ಸಂವಾದ ನನಗೆ ಮುಖ್ಯವೆನಿಸುತ್ತಿದೆ.

ಸತ್ಯನಾರಾಯಣ ಅವರು ಮಹಿಳಾ ಸಾಹಿತ್ಯದಲ್ಲಿನ ಮಾದರಿಗಳ ಕೊರತೆಯನ್ನು ಪುರುಷ ಸಾಹಿತ್ಯದ ಸಮೃದ್ಧಿಯ ಮೂಲಕ ಪ್ರತಿಪಾದಿಸುತ್ತಿದ್ದರೆ, ಸಂವಾದಕಾರರು ಆ ಸಮೃದ್ಧಿಯ ಸಂಕಥನವನ್ನು ಪ್ರಶ್ನಿಸದೆ (ಇಲ್ಲಿ ಕುವೆಂಪು, ಕಾರಂತರಂತಹ ಲೇಖಕರನ್ನು ಮಾದರಿ ನಿರ್ಮಾಣಕಾರರೆಂಬುದನ್ನು ನಿರಾಕರಿಸುವುದು ಹೇಗೆ ಎಂಬ ಸಂಕೋಚ ವಿರಬಹುದು) ಮಹಿಳಾ ಸಾಹಿತ್ಯದ ವಕಾಲತ್ತನ್ನು ನಿರ್ವಹಿಸಲೆತ್ನಿಸಿ ದಂತಿದೆ. ಬಹುಶಃ ಸಾಹಿತ್ಯ ಕೃತಿಗಳು/ಸಾಹಿತ್ಯ ರಚನಕಾರರು ಮತ್ತು ಸಮೃದ್ಧಿ ಸಂಕಥನದ ನಿರ್ಮಾಣಗಳು/ ನಿರ್ಮಾಣಕಾರರು ಭಿನ್ನ ವೆಂಬುದನ್ನು ಸ್ಪಷ್ಟಪಡಿಸಿಕೊಂಡರೆ ಈ ಸಂಕೋಚದಿಂದ ಹೊರಬರಬಹುದೆನಿಸುತ್ತದೆ. ಏಕೆಂದರೆ ಒಂದು ಕೃತಿ/ಕೃತಿಕಾರ ಉತ್ತಮ ವೆನ್ನುವುದು, ಅದರಿಂದ ಮುಂದಿನವರು ಪ್ರಭಾವಿತರಾದರು ಎನ್ನುವುದು ಬೇರೆ ಬೇರೆ ಸಂಗತಿ. ಲೇಖಕನೊಬ್ಬ ತನ್ನ ಮಟ್ಟಿಗೆ ಒಳ್ಳೆಯದು ಎನಿಸುವ ಕೃತಿಯೊಂದನ್ನು ರಚಿಸುವ ಜವಾಬ್ದಾರಿ ಹೊಂದಿರುತ್ತಾನೆ ಅಷ್ಟೆ ಅದನ್ನು ಮುಂದಿನ ಲೇಖಕರು ಮುಂದುವರಿಸುವುದು, ವಿಸ್ತರಿಸುವುದು ಅವರ ವ್ಯಾಪ್ತಿಯದಲ್ಲ. ಹಾಗಾಗಿ ಅದನ್ನು ಲೇಖಕನ ಸಾಮರ್ಥ್ಯದ ಜೊತೆ ಗಂಟು ಹಾಕಬೇಕಿಲ್ಲವೆನಿಸುತ್ತದೆ. ಕುವೆಂಪು, ಕಾರಂತ ಮತ್ತು ತ್ರಿವೇಣಿಯವರ ಸಾಹಿತ್ಯಶ್ರಮವು 'ಮೂಲಮಾದರಿ'ಯೆನ್ನುವ ಪರಿಮಾಣದ ಮೂಲಕವೇ ಸಾಬೀತುಗೊಳ್ಳಬೇಕೆಂದಿಲ್ಲ.

ಇನ್ನು ಕುವೆಂಪು, ಕಾರಂತರು ಮೂಲಮಾದರಿ ನಿರ್ಮಾಣಕಾರರೇ ಎಂಬ ವಿಚಾರ. ಕನ್ನಡ ವಿಮರ್ಶೆಗಳು ಒಂದೆಡೆ ಆಧುನಿಕ ಸಾಹಿತ್ಯದ ಪಂಥಗಳು ಪ್ರತಿಕ್ರಿಯಾತ್ಮಕವಾಗಿ ಹುಟ್ಟಿಕೊಂಡವು ಎಂಬ ಸಂಕಥನವನ್ನು ಮಂಡಿಸುತ್ತವೆ. ನವೋದಯದವರ ಆದರ್ಶಮಯತೆ ಬಗ್ಗೆ ನವ್ಯರಿಗೆ ತಕರಾರು, ನವ್ಯರ ವ್ಯಕ್ತಿನಿಷ್ಠತೆ ಬಂಡಾಯದವರಿಗೆ ಅಲರ್ಜಿ, ಇಡೀ ಕನ್ನಡ ಕಾವ್ಯಪರಂಪರೆಯೆನ್ನುವುದು ದಲಿತರಿಗೆ ಬೂಸ .. .. ಹೀಗೆ. ಇದನ್ನು ಒಪ್ಪುವುದಾದರೆ ಹೂವಯ್ಯ, ರಾಮರು ಮೂಲಮಾದರಿ ಹೇಗಾದಾರು?

ಒಂದೇ ಮಾತಿನಲ್ಲಿ ಹೇಳುವುದಾದರೆ, ಆಧುನಿಕೋತ್ತರ ಚಿಂತನೆಗಳು 'ಮೂಲ', 'ಸ್ವೋಪಜ್ಞ' ಎಂಬ ಪರಿಕಲ್ಪನೆಗಳನ್ನೇ ಅನುಮಾನಿಸುತ್ತಿರುವ ಈ ಹೊತ್ತಿನಲ್ಲಿ 'ಮೂಲಮಾದರಿ'ಯ ಈ ಪ್ರಮೇಯ ಬಾಲಿಶವೆನಸುತ್ತದೆ. ■

*ನಮ್ಮದೇ ಸಾಂಸ್ಕೃತಿಕ ಚಹರೆಯ ತುರ್ತು ಇರುವ ಹೊತ್ತಲ್ಲಿ 'ಮಾನಸ'ದ ಇರುವಿಕೆಗೆ ಚಾರಿತ್ರಿಕ ಮಹತ್ವವಿದೆ.... ನಿಮ್ಮೆಲ್ಲರ ಕಮಿಟ್‌ಮೆಂಟ್ ಮತ್ತು ಪರಿಶ್ರಮ ಮುಖ್ಯ. ಕಳೆದ ಸಂಚಿಕೆಗಳಲ್ಲಿ ಮಹಿಳಾ ಬರವಣಿಗೆಯ ಬಗೆಗಿನ ಸಂವಾದ ಅರ್ಥಪೂರ್ಣವಾಗಿ ಬಂದಿದೆ. ಲಲಿತಾ ಸಿದ್ದಬಸವಯ್ಯ ಅವರ 'ಹೊಸ ಪದ್ಯ' ತುಂಬ ಇಷ್ಟವಾಯಿತು.*

*- ವಿನಯಾ*

*ಸಂವಾದ-2*

# ನನ್ನ ಗಮನವಿದ್ದುದು ಮಹಾನ್ ಕೃತಿಗಳಲ್ಲಿ ಕಾಣುವ 'ಮನುಷ್ಯ ಮಾದರಿ'ಗಳತ್ತ (Human Types)

● *ಕೆ. ಸತ್ಯನಾರಾಯಣ*

ನನ್ನ ಬರಹಕ್ಕೆ ಬಂದ ಎಲ್ಲ ಸ್ಪಂದನಗಳನ್ನು ಕುತೂಹಲದಿಂದಲೂ .... ಆಸಕ್ತಿಯಿಂದಲೂ ಗಮನಿಸಿದ್ದೇನೆ. ಲಲಿತಾ ಸಿದ್ದಬಸವಯ್ಯ ಮತ್ತು ಕೆ.ಎಸ್. ಮಾಲತಿಯವರ ಗ್ರಹಿಕೆ ನನ್ನ ಬರಹಕ್ಕೆ ಪೂರಕವಾಗಿವೆ. ಬಹುಪಾಲು ಗೆಳತಿಯರು ವಕ್ತಾರರಂತೆ, ಇಲ್ಲದೇ ಇರುವ ಎದುರಾಳಿಯನ್ನು ಊಹಿಸಿಕೊಂಡು ವಕ್ತಾರರ ಶೈಲಿಯಲ್ಲಿ ಪ್ರತಿವಾದಿ ಭಯಂಕರರಂತೆ ಬರೆಯಲು – ಯೋಚಿಸಲು ಪ್ರಯತ್ನಿಸಿದ್ದಾರೆ.

ನನ್ನ ಗಮನವಿದ್ದುದು, ಇರುವುದು ಶ್ರೇಷ್ಠ ಕಥನಕಾರರು, ಕಾದಂಬರಿಕಾರರು ತಮ್ಮ ಸಾಂಸ್ಕೃತಿಕ ಮುಂಗಾಣ್ಕೆಯ ದೆಸೆಯಿಂದಾಗಿ ಮನುಷ್ಯ ಸ್ವಭಾವ-ವರ್ತನೆಗಳಲ್ಲಾಗುವ ಪಲ್ಲಟಗಳನ್ನು ನಿರೀಕ್ಷಿಸುವ ರೀತಿಯನ್ನು ಕುರಿತು. ಪ್ರಾಸಂಗಿಕವಾಗಿ ಲೇಖಕಿಯರ ಬಗ್ಗೆ ಹೇಳಿದ್ದು. ಪುರುಷರಿಗೆ ಬೇಕಾದ ಮಾದರಿಗಳನ್ನು ಮಾತ್ರ ಲೇಖಕಿಯರು ಸೃಷ್ಟಿಸಬೇಕೆಂದಾಗಲೀ, ಕಲಾಕೃತಿಯಿಂದಾಚೆಗೆ ಈಗಾಗಲೇ ನಿರ್ಮಾಣವಾಗುತ್ತಿರುವ ಹೊಸ ಮಾದರಿಗಳನ್ನು ಕಡೆಗಣಿಸಬೇಕೆಂದಾಗಲೀ... ಅಲ್ಲ. ನನ್ನ ಗಮನವಿದ್ದುದು ಮಹಾನ್ ಕಾದಂಬರಿಗಳಲ್ಲಿ ಕಾಣುವ, ಕಾಣಿಸುವ 'Human Types' ಬಗ್ಗೆಯೇ ಹೊರತು ಪುರುಷರು ಸಾಹಿತ್ಯಿಕವಾಗಿ, ಸಾಮಾಜಿಕವಾಗಿ ಬಯಸುವ "ಮಹಿಳಾ ಮಾದರಿಗಳ" ಬಗ್ಗೆ ಅಲ್ಲವೇ ಅಲ್ಲ. ದಸ್ತೊವಸ್ಕಿ Notes From Under Ground ಬರೆದಾಗ, ಇಬ್ಸನ್ 'ನೋರಾ' ಬರೆದಾಗ, ವರ್ಜೀನಿಯಾ ವುಲ್ಫ್ "A Room of Her Own " ಬರೆದಾಗ ಸೃಷ್ಟಿಯಾದದ್ದು ಇಂತಹ ಮಾದರಿಗಳು ಮತ್ತು ಈ ಮಾದರಿಗಳು ಮುಂದಿನ ತಲೆಮಾರಿನ ಲೇಖಕರನ್ನು, ಓದುಗರನ್ನು, ಚಿಂತಕರನ್ನು ಬಹಳವಾಗಿ ಕಾಡಿ, ಈ ಮಾದರಿಗಳೇ ಇನ್ನೂ ವಿವರವಾಗಿ ಸ್ಫುಟಗೊಂಡವು ಮತ್ತು ಭಿನ್ನ ಮಾದರಿಗಳ ಸೃಷ್ಟಿಗೆ ಕಾರಣವಾದವು.

ಇಂತಹ ಹೊಸ ಮಾದರಿಗಳು ಸಾಹಿತ್ಯ ಕೃತಿಗಳಲ್ಲೇ ಬರಬೇಕೆಂದೇನು ನಿಯಮವಿಲ್ಲ. ಸಮಾಜಿಕ – ರಾಜಕೀಯ ಜೀವನದಲ್ಲು, ಕೌಟುಂಬಿಕ ವಿವರಗಳಲ್ಲು ಕಾಣಿಸಿಕೊಳ್ಳಬಹುದು. ಮೇಧಾಪಾಟ್ಕರ್, ಮಯಾವತಿ ಉದಾಹರಣೆಗಳನ್ನ ಕೆಲವರು ಪ್ರಸ್ತಾಪಿಸಿದ್ದಾರೆ, ಸರಿಯೇ. ಇಂತಹವರು ಬದುಕುತ್ತಿರುವ, ಕ್ರಿಯಾಶೀಲವಾಗುತ್ತಿರುವ ಕಾಲದ .....ಆಸುಪಾಸಿನಲ್ಲಿ ಕಥನ-ಕಾದಂಬರಿ ಕ್ಷೇತ್ರದಲ್ಲಿ ದೊಡ್ಡ ಪ್ರತಿಭೆಗಳಿಲ್ಲದಿದ್ದರೆ, ಇಂತಹ / ಈ ಮಾದರಿಗಳು ಸಾಹಿತ್ಯ ಕೃತಿಗಳಲ್ಲಿ ಪರೀಕ್ಷೆಗೆ/ಮಂಡನೆಗೆ ಒಳಗಾಗದೇ ಹೋಗಬಹುದು.

ಕಾದಂಬರಿಗಳಲ್ಲಿ ಇಂತಹ ಮಾದರಿಗಳು ಕಾಣಿಸಿಕೊಂಡಾಕ್ಷಣಕ್ಕೆ ಇವು ಪರಿಪೂರ್ಣ ಪಾತ್ರ ರಚನೆಗಳಾಗಿ ಇರುತ್ತವೆ ಎಂದೇನೂ ತಿಳಿಯಬಾರದು. ಹೂವಯ್ಯನ ಪಾತ್ರ ಭಾವುಕತೆಯಿಂದ ಕೂಡಿದೆ, ದುರ್ಬಲವಾದದ್ದು, ಲೇಖಕರ Wishful Thinkingನ್ನು ಮಾತ್ರ ಇದು ಪ್ರತಿಪಾದಿಸುತ್ತದೆ ಎಂದೆಲ್ಲ ಟೀಕಿಸುವಾಗಲೂ ..... ಆ ಕಾಲದ ನಮ್ಮ ಸಮಾಜದ ಕನಸುಗಾರಿಕೆಯನ್ನು ಹೂವಯ್ಯ ಪ್ರತಿನಿಧಿಸಿದ ಎಂಬುದನ್ನು ಮರೆಯಬಾರದು.

ಕನ್ನಡ ಕಾದಂಬರಿಗಳ ಮಟ್ಟಿಗೆ ಹೇಳುವುದಾದರೆ, ಹೊಸ ಕಾಲದ ಹೆಂಗಸಿನ ಮನಸ್ಸು, ಆಸೆ, ಆಕಾಂಕ್ಷೆಗಳಲ್ಲಾಗುತ್ತಿದ್ದ ಪಲ್ಲಟಗಳ ಬೀಜ, ಸ್ಥೂಲ ರೂಪವನ್ನು ಮೊದಲಿಗೆ ಗುರುತಿಸಿದವರು ತ್ರಿವೇಣಿ. ಅನಂತರದ ಲೇಖಕಿಯರು ತ್ರಿವೇಣಿಯವರ ಕಾಣ್ಕೆಗೆ ಸಾಮಾಜಿಕ ಸಾಂಸ್ಕೃತಿಕ ವಿವರಗಳನ್ನು ಸೇರಿಸಿ, ಮತ್ತಷ್ಟು ದಷ್ಟಪುಷ್ಟಗೊಳಿಸುತ್ತಿದ್ದಾರೆ. ಸಮಕಾಲೀನ ಲೇಖಕಿಯರ ಕತೆ-ಕಾವ್ಯಗಳಲ್ಲೂ ಇಂತಹ ಪ್ರಯತ್ನಗಳ ತುಣುಕು ಫಲಗಳು, ಮುನ್ನೋಟಗಳು ಕಾಣುತ್ತವೆ. ಇಷ್ಟೆಲ್ಲ ಹೇಳಿದರೂ ಹೊಸ Human Types ಮನುಷ್ಯ ಮಾದರಿಯನ್ನು ಗುರುತಿಸುವುದು ಕಾದಂಬರಿಕಾರನ ಕೆಲಸಗಳಲ್ಲಿ ಒಂದು ಮಾತ್ರ. ಕಾದಂಬರಿಯೊಂದು ದೊಡ್ಡದಾಗಬೇಕಾದರೆ, ಈ ಕೆಲಸದ ಜೊತೆಗೇ ಇನ್ನೂ ಬೇರೆ ಜವಾಬ್ದಾರಿಗಳನ್ನು ಕೂಡ ನಿರ್ವಹಿಸಬೇಕಾಗುತ್ತದೆ. ಈ ನನ್ನ ಚಿಂತನೆಯಲ್ಲಿ ಸ್ಪಷ್ಟತೆಯಿದ್ದುದರಿಂದಲೇ, ಈಚೆಗೆ 'ವಿಕ್ರಾಂತ ಕರ್ನಾಟಕ' ವಾರಪತ್ರಿಕೆಗೆ ಕನ್ನಡದ ಹತ್ತು ಮುಖ್ಯ ಕಾದಂಬರಿಗಳನ್ನು ...ಆಯ್ದು, ಟಿಪ್ಪಣಿಗಳನ್ನು ಬರೆಯಬೇಕೆಂದು ಶ್ರೀಯುತ ಡಿ.ಎಸ್.ನಾಗಭೂಷಣರು ಸೂಚಿಸಿದಾಗ ತ್ರಿವೇಣಿ ನಮ್ಮ ಶ್ರೇಷ್ಠ ಕಥನಕಾರರಲ್ಲಿ ಸೇರದೇ ಹೋದರು .....ಅವರ "ಕಂಕಣ" ಕಾದಂಬರಿಯನ್ನು ಪ್ರಾತಿನಿಧಿಕವಾಗಿ.. ಆಯ್ಕೆ ಮಾಡಿದ್ದೆ.

ನನ್ನದೊಂದು ಸೂಚನೆ. ಇಂತಹ ವಾಗ್ವಾದಗಳು ನಡೆದಾಗ ಯಾರೇ ಆದರೂ ವಕ್ತಾರರಂತೆ, ಚರ್ಚಾಪಟುಗಳಂತೆ ಬರೆಯದೆ/ ಯೋಚಿಸದೆ, ತಮ್ಮ-ತಮ್ಮ ಒಳದನಿಗೆ ಕಿವಿಗೊಟ್ಟು ಬರೆಯುವುದೇ ಒಳ್ಳೆಯದು. "ಸ್ತ್ರೀಮತವನ್ನು ಉತ್ತರಿಸಬಲ್ಲರೇನು" ಎಂಬ ಧೋರಣೆ ತಪ್ಪು. ಸ್ತ್ರೀವಾದವಾಗಲೀ, ದಲಿತಪ್ರಜ್ಞೆಯಾಗಲೀ, ಬಂಡಾಯದ ಧ್ವನಿಯಾಗಲೀ ಕೊನೆಗೆ ಎಲ್ಲವೂ ಬದುಕನ್ನು ನೋಡುವ ಒಂದು ದೃಷ್ಟಿಕೋನ ಮತ್ತು ವಿಶಿಷ್ಟ ಒತ್ತು, ಅಷ್ಟೇ ಹೊರತು-ಯಾವುದೊಂದೇ ದೃಷ್ಟಿಕೋನವೂ ತನ್ನಷ್ಟಕ್ಕೇ ತಾನೇ ಸ್ವಯಂಪೂರ್ಣವೂ ಅಲ್ಲ, ಪರಿಪೂರ್ಣವೂ ಅಲ್ಲ, ಸಮಗ್ರ ಜೀವನ ಪ್ರವಾಹವಂತೂ ಖಂಡಿತ ..ಅಲ್ಲವೇ ಅಲ್ಲ. ■

*'ನಮ್ಮ ಮಾನಸ' ಡಿಸೆಂಬರ್ ಸಂಚಿಕೆಯ ಪುಟ ೧೫ರಲ್ಲಿ 'ಆಧುನಿಕೋತ್ತರ....' ಪ್ಯಾರಾದ ಕೊನೆಯ ಸಾಲಿನಲ್ಲಿ ಗೋಷ್ಠಿಯ ಅಧ್ಯಕ್ಷೆ ಗೀತಾ ನಾಗಭೂಷಣ ಎಂದು ಮುದ್ರಿತವಾಗಿದೆ. ದಯಮಾಡಿ ಅದನ್ನು ಸವಿತಾ ನಾಗಭೂಷಣ ಎಂದು ಓದಿಕೊಳ್ಳಬೇಕಾಗಿ ಪ್ರಾರ್ಥನೆ.*

*- ಸಂ.*

*ಸಂವಾದ–3*

# ಆಧುನಿಕ ಹೆಂಗಸೆಂಬ ಕನಸು

● *ಡಾ॥ ಬಿ.ಎನ್. ಸುಮಿತ್ರಾಬಾಯಿ*

**ಕೆ.**ಸತ್ಯನಾರಾಯಣ ಅವರು ತಮ್ಮ ಕಿರುಟಿಪ್ಪಣಿಯಲ್ಲಿ ವಿಚಾರ ಮಾಡಲು ಎತ್ತಿರುವ ಪ್ರಶ್ನೆಗಳು ನಿಜವಾಗಿ ಪ್ರಶ್ನೆಗಳಲ್ಲ. ಅವರು ಈಗಾಗಲೆ ತಲುಪಿರುವ ತೀರ್ಮಾನಕ್ಕೆ ಒಂದು ವಿಸ್ತಾರ ಜಿಜ್ಞಾಸೆಯ ಆಕೃತಿಯನ್ನು ಒದಗಿಸಲು ಪ್ರಶ್ನೋತ್ತರಗಳ ಸರಣಿಯನ್ನು ಅಲ್ಲಿ ಅಳವಡಿಸುತ್ತಾರೆ ಎನಿಸುತ್ತದೆ. ಅವರು ಪ್ರಶ್ನೆಯ ಆಕಾರದಲ್ಲಿ ತಮ್ಮ ನಂಬಿಕೆಯ ಒಂದು ವಿಚಾರವನ್ನು ಮುಂದಿಟ್ಟುರುವುದು ಬಹುಶಃ ಹಲವು ಲೇಖಕಿಯರನ್ನು ಪ್ರತಿಕ್ರಿಯಿಸುವಂತೆ ಪ್ರಚೋದನೆಯನ್ನು ನೀಡಿರಬಹುದು. ಅದೂ ಅವರ ಆಶಯಗಳಲ್ಲಿ ಒಂದಾಗಿರಬಹುದು.

ಆ ಲೇಖನ ಒಂದು ಪ್ರಶ್ನೆಯಲ್ಲ, ಅದೊಂದು ತೀರ್ಮಾನ. ಆದ್ದರಿಂದಲೇ ಅದರ ಸಾರಾಂಶವನ್ನು ಹೀಗೆ ಹೇಳಬಹುದು: ಆಧುನಿಕತೆಗೆ ತೆರೆದುಕೊಳ್ಳತೊಡಗಿದ್ದ ನಮ್ಮ ನಾಡಿಗರೆಲ್ಲರ ಮನದ ಮಿಡಿತಗಳನ್ನು ಮುಂದಾಗಿ ಕಂಡು ಕಾಣಿಸಿದ ಮಹಾನ್ ಪ್ರತಿಭೆ ಕುವೆಂಪು, ಕಾರಂತರದು. ಅವರು ಚಿತ್ರಿಸಿದ ಕೆಲವು ಮೂಲ ಮಾದರಿ ಪಾತ್ರಗಳು ಮುಂದಿನ ಎಲ್ಲ ಲೇಖಕರಿಗೂ ದಿಕ್ಸೂಚಿಯಾದವು. ಆದ್ದರಿಂದ ಮುಂದಿನ ಎಲ್ಲ ಲೇಖಕರು ಚಿತ್ರಿಸಿರುವುದು, ಅದೇ ಆಧುನಿಕ ಮಾನವನ ವಿಸ್ತೃತ ರೂಪಗಳನ್ನು ಮಾತ್ರ.

ಇದೇ ವಿಚಾರವನ್ನು ಆಧುನಿಕ ಹೆಂಗಸಿನ ಸಂದರ್ಭಕ್ಕೂ ವಿಸ್ತರಿಸುವುದಾದರೆ ಅಂಥ ಮೂಲಮಾದರಿ ಕಟ್ಟಿಕೊಟ್ಟ ಮೊದಲ ಲೇಖಕಿ ತ್ರಿವೇಣಿ. ಮುಂದಿನ ಎಲ್ಲ ಲೇಖಕಿಯರೂ ಅದೇ ಮಾದರಿಯನ್ನು ವಿಸ್ತರಿಸುತ್ತಿದ್ದಾರಷ್ಟೇ. ಎಷ್ಟೋ ಇಂಥ ಪ್ರಯತ್ನಗಳೂ ಸ್ತ್ರೀವಾದಿ, ಸ್ತ್ರೀಸಂವೇದನೆಯ ಚರ್ಚೆಗಳೂ ದಶಕಗಳಿಂದ ನಡೆಯುತ್ತಿದ್ದರೂ ಮಹಿಳೆಯರ ಅಭಿವ್ಯಕ್ತಿಗಿರುವ ಅನೇಕ ಸಾಂಸ್ಕೃತಿಕ ತೊಡಕುಗಳು ಅವರನ್ನು ಸಮರ್ಥವಾಗಿ ಆಧುನಿಕ ಹೆಂಗಸಿನ ಕಟ್ಟೋಣದತ್ತ ಬೆಳೆಯಗೊಟ್ಟಿಲ್ಲ. ಅನೇಕ ಆಧುನಿಕ ಸ್ತ್ರೀಮಾದರಿಗಳು ನಮ್ಮೆದುರೇ ಸಂಭವಿಸುತ್ತಿದ್ದರೂ ಆ ಮಾದರಿಗಳ ಒಳಹೊಕ್ಕು, ಪರೀಕ್ಷಿಸಿ, ಪ್ರತಿನಿಧೀಕರಿಸಬಲ್ಲ ಸಾಮರ್ಥ್ಯ ಇನ್ನೂ ನಮ್ಮ ಲೇಖಕರಿಯರಿಗೆ ಮೂಡಿಲ್ಲ – ಇದು ಸತ್ಯನಾರಾಯರ ವಿಚಾರಗಳ ತಾತ್ಪರ್ಯ ಎಂದು ನಾನು ತಿಳಿಯುತ್ತೇನೆ.

ಸತ್ಯನಾರಾಯಣರ ಈ ವಿಚಾರಗಳಲ್ಲಿ ಇರುವ ಒಂದು ಮುಖ್ಯ ಸೂತ್ರವು ಒಂದು ಕಾಲದಲ್ಲಿ ತುಂಬ ಪ್ರಭಾವ ಬೀರಿದ್ದಂಥ ರೊಮ್ಯಾಂಟಿಕ್ ತಾತ್ವಿಕತೆಯಿಂದ ಹುಟ್ಟಿಬಂದಿರುವಂಥದು. ಬರಹಗಾರ/ಕಲಾವಿದ ಎಂದರೆ ಒಬ್ಬ ಸ್ವಾಯತ್ತ ವ್ಯಕ್ತಿ ; ಸ್ವಯಂಭೂವಿನಂತೆ ತನ್ನ ಅಸ್ಖಲಿತ ಪ್ರತಿಭೆ, ವೈಚಾರಿಕತೆಗಳಿಂದ ಸಮುದಾಯಗಳನ್ನ ತಿದ್ದಿ ರೂಪಿಸಿ, ಬೆಳೆಸಬಲ್ಲ ಸಾರ್ವಭೌಮ ಅಧಿಕಾರವುಳ್ಳ ಪ್ರಜ್ಞಾಲೋಕ ಅವನದು. ಅವನು ಸೃಷ್ಟಿಸುವ ಸಾಹಿತ್ಯಕೃತಿ/ಕಲಾಕೃತಿ ಅವನ ವ್ಯಕ್ತಿತ್ವ, ಸಾಮರ್ಥ್ಯಗಳ ಪ್ರತಿರೂಪವಾಗಿದ್ದು ಸಮಾಜವನ್ನು ತಿದ್ದಿ ಕಟ್ಟಿಕೊಡುವ ಸಾಧನ ಅದಾಗಿರುತ್ತದೆ – ಎಂದು ಆತಾತ್ವಿಕತೆ ಹೇಳುತ್ತದೆ.

ಆಧುನಿಕೋತ್ತರ ಚಿಂತನೆಗಳು ಈ ಕರ್ತೃ– ಮತ್ತು ಕೃತಿಗಳ ಒಳ ಸಂಬಂಧಗಳನ್ನು, ಅವು ಉತ್ಪನ್ನವಾಗುವ ಸಾಂಸ್ಕೃತಿಕ ಪರಿಸರದಲ್ಲಿನ ರಾಜಕೀಯ, ಆರ್ಥಿಕ, ಸಾಮಾಜಿಕ, ಭೌತಿಕ ಶಕ್ತಿಗಳ ಒತ್ತಡಗಳಿಂದ ಉಂಟಾಗುವಂಥದ್ದೆಂದು ಪ್ರತಿಪಾದಿಸುತ್ತವೆ. ಈ ನಿಟ್ಟಿನಿಂದ ಸಾಹಿತ್ಯಪರಂಪರೆಯನ್ನು ಪರಿಶೀಲಿಸುವವರು ಬರಹಗಾರ ಮತ್ತು ಆತನ ಸೃಷ್ಟಿಗಳನ್ನು ಸಾಂಸ್ಕೃತಿಕ ಸಾಪೇಕ್ಷತೆಯ ಜಾಗದಲ್ಲಿ ನೋಡಲು ಬಯಸುತ್ತಾರೆಯೇ ಹೊರತು ಆ ಪರಿಸರಕ್ಕೆ ಅತೀತವಾದ ಸರ್ವಾಧಿಕಾರದ ನೆಲೆಯಲ್ಲಿ ಅಲ್ಲ. ಆಧುನಿಕೋತ್ತರ ಚಿಂತನೆಗಳಲ್ಲಿ ಒಂದಾಗಿರುವ ಸ್ತ್ರೀವಾದವು ಪಿತೃಸಂಸ್ಕೃತಿಯ ತಾತ್ವಿಕತೆಯನ್ನು ಕಳಚಿ, ಮಾನವೀಯ ಸಮಾನತೆಯ ನೆಲೆಯಲ್ಲಿ ಮತ್ತೆ ಕಟ್ಟಕೊಡಲು ಸಾಹಿತ್ಯ/ಕಲೆ ಮುಂತಾದ ವ್ಯವಸ್ಥೆಯಲ್ಲಿನ ಎಲ್ಲ ಅಭಿವ್ಯಕ್ತಿಯ ಜಾಗಗಳನ್ನೂ ಶೋಧಿಸುವ ಒಂದು ರಾಜಕೀಯ ನಿಲುವುಳ್ಳದ್ದು. ಇಂಥ ತಿಳಿವಳಿಕೆ ಕಳೆದ ಶತಮಾನದ ಎಂಬತ್ತರ ದಶಕದಿಂದ ಈಚೆಗೆ ನಮ್ಮ ನಾಡಿನ ಲೇಖಕ–ಲೇಖಕಿಯರ ಮೇಲೆ ಪ್ರಭಾವಬೀರಿದೆಯಾದರೂ ಈ ವಾದವು ಪ್ರತಿಪಾದಿಸುವ ಸ್ವತಂತ್ರ, ಸ್ವಾಯತ್ತ ವಿಮುಕ್ತ ವ್ಯಕ್ತಿಯಾಗಬೇಕಾದ ಹೆಂಗಸಿನ ಒಂದು ಮುಂಗಾಣ್ಕೆಯನ್ನು ಎಷ್ಟೋ ದಶಕಗಳಿಗೂ ಮೊದಲೇ ತ್ರಿವೇಣಿಯವರು ಕಟ್ಟಲು ತಮ್ಮ ಕಥನ ಸಾಹಿತ್ಯದ ಮೂಲಕ ಹೊಳಹುಹಾಕಿದ್ದರು ಎನ್ನುವುದು ಸತ್ಯನಾರಾಯಣರು ಹೇಳುವ ವಿಚಾರ. ತ್ರಿವೇಣಿ ಬರೆದ ಮೂಲ ಮಾದರಿಗಳದೇ ವಿಸ್ತರಣೆ ಅಂದಿನಿಂದ ಇಂದಿನವರೆಗೂ ಬಂದಿರುವ ಮಹಿಳಾ ಕಥನ ಸಾಹಿತ್ಯದಲ್ಲಿ ಇದೆ– ಎಂದು ಅವರು ತಲುಪುವ ತೀರ್ಮಾನಕ್ಕೆ ಮಹಿಳೆಯರ ಬರಹದಿಂದ ಆಧಾರಗಳೇನನ್ನೂ ಅವರು ನೀಡಲು ಯತ್ನಿಸುವುದಿಲ್ಲ – ಎಂಬುದನ್ನು ಗಮನಿಸಬೇಕು.

ಬದಲಾಗಿ ಸ್ತ್ರೀವಾದದ ತಾತ್ತ್ವಿಕ ಒತ್ತಡಗಳಿಂದ ಮಹಿಳಾಭಿವ್ಯಕ್ತಿಯ ಪ್ರಕ್ರಿಯೆ ತೀವ್ರಗೊಂಡರೂ ಸಾಂಸ್ಕೃತಿಕವಾಗಿರುವ ಜಿಕ್ಕಟ್ಟು, ಜಿಗಿತ, ಬಿಡಲಾರದ ನಿರ್ಬಂಧಗಳ ತೊಡಕುಗು ಮಹಿಳೆಯರ ಅಭಿವ್ಯಕ್ತಿಯು ಸಮಗ್ರವಾಗದಂತೆ ಮಾಡಿವೆ ಎಂಬುದನ್ನು ಸಾರರೂಪದಲ್ಲಿ ಅವರು ಗ್ರಹಿಸುತ್ತಾರೆ. ತಾವೇ ಮಾಡಿದ ಒಂದು ವೈಚಾರಿಕ ತೀರ್ಮಾನಕ್ಕೆ ಮಹಿಳಾ ಬರಹದ ಮೂಲಕವೇ ಹೋಗಬೇಕಾದ ಕಷ್ಟದಿಂದ ಪಾರಾಗಲೆಂದೋ ಏನೋ, ತಮ್ಮ ಎರಡು ಕಾದಂಬರಿಗಳಲ್ಲಿನ ಕೇಂದ್ರ ಸ್ತೀ ಪಾತ್ರಗಳನ್ನೇ ಉದಾಹರಿಸಿ, 'ಆಧುನಿಕ ಹೆಂಗಸೆಂಬ ತಮ್ಮ ಒಂದು ರೊಮ್ಯಾಂಟಿಕ್' ಕಲ್ಪನೆಯ ಏಕಾಕಾರದ ಮಾದರಿ ಅವುಗಳಲ್ಲಿ ಸಿಕ್ಕಬಹುದೋ ಏನೋ ಎಂದು ಸೂಚಿಸುತ್ತಾರೆ.

ಆದರೆ ಆಧುನಿಕೋತ್ತರ ಚಿಂತನೆಗಳಲ್ಲಿ ಸೇರಿರುವ ಸ್ತ್ರೀವಾದಿ ತಾತ್ತ್ವಿಕತೆಗೂ ಸತ್ಯನಾರಾಯಣ ಹೇಳಹೊರಡುವ ಏಕಾಕಾರದ, ಎಲ್ಲೆಲ್ಲೂ ಇರುವ, ಎಲ್ಲೂ ಒಂದೆಡೆ ಇರಲಾರದ ಸಮಗ್ರ ಆಧುನಿಕ ಹೆಂಗಸಿನ ಪರಿಕಲ್ಪನೆಗೂ ಮೂಲಭೂತವಾದ ವಿರೋಧವಿದೆ. ತ್ರಿವೇಣಿಯವರ ನಂತರ ಬರೆಯುತ್ತಿರುವ ಲೇಖಕಿಯರೆಲ್ಲ ಹೊಸಕಾಲದ ಹೆಂಗಸಿನ ಸಂವೇದನಾ ಸಂಕೀರ್ಣವನ್ನು ಒಟ್ಟಿಗೆ ಹಿಡಿದು ಕಟ್ಟಿಕೊಡಲೇ ಬೇಕು; ಹಾಗೆ ಮಾಡಿದ್ದಾದರೆ ಸಾಹಿತ್ಯ ಶ್ರೇಷ್ಠವಾಗಬಲ್ಲದು; ಅಂಥ ಮೂಲ ಮಾದರಿ ನಿರ್ಮಿತಿ ಸಾಧ್ಯವಾದಲ್ಲಿಯೇ ಮಹಾನ್ ಪ್ರತಿಭೆ ಎಂದು ಬರಹಗಾರರನ್ನು ಗುರುತಿಸಲು ಸಾಧ್ಯ–ಮುಂತಾದ ನಿರೀಕ್ಷೆಗಳನ್ನೆಲ್ಲ ಮಹಿಳಾ ಬರಹಗಾರರು ತುಂಬಿಕೊಡಲು ಯತ್ನಿಸಬೇಕೋ ಅಥವಾ ತಮ್ಮ ಬದುಕಿನ, ತಮ್ಮ ವ್ಯಕ್ತಿತ್ವದ ಮೂಲಕ ಪಡೆದುಕೊಳ್ಳುವ ಅನುಭವಗಳನ್ನು ಶೋಧಿಸುವತ್ತ ಪ್ರಾಮಾಣಿಕ, ಕಲಾತ್ಮಕ ಯತ್ನಕ್ಕೆ ತಮ್ಮನ್ನು ತೊಡಗಿಸಿಕೊಳ್ಳಬೇಕೋ? ತಮ್ಮೊಳಗೆ ತಾವು ಮೊದಲು ಬಯಲನ್ನು ಕಾಣಲು ಸಾಧ್ಯವಾದಾಗ ಅಲ್ಲವೆ ಪಥ ಆಗಸಕ್ಕೆ ? ಮಾನವ ವ್ಯಕ್ತಿಗಳಾಗಿ ಸ್ವೀಕೃತರಾಗಲಿಕ್ಕಾಗಿಯೇ ಹೆಣಗಾಡಬೇಕಾಗಿರುವ ಪರಿಸ್ಥಿತಿಗಳಲ್ಲಿ 'ದೂರಲೋಕದ ಯಾವುದೋ ಅವ್ಯಕ್ತ ಹೆಂಗುಸಷ್ಟೇ'

ಆಗಿರುವ ಆಧುನಿಕ ಹೆಂಗಸೆಂಬ ಒಂದು ಪ್ರತೀಕ ಪರಿಕಲ್ಪನೆಯ ಬೆನ್ನುಹತ್ತುವುದರ ಬದಲು ಈ ನೆಲದಲ್ಲಿನ ಮಹಿಳೆಯರು ತಮ್ಮನ್ನು ತಾವು ಮೀರುವ ಅನನ್ಯವೂ ಅನಂತರವೂ ಆದ ಸಾಧ್ಯತೆಗಳ ಕಟ್ಟೋಣದಲ್ಲಿ ನಮ್ಮ ಇಂದಿನ ಬಹು ಗಮನಾರ್ಹ ಲೇಖಕಿಯರೆಲ್ಲ ತೊಡಗಿಕೊಂಡಿದ್ದಾರೆಂಬುದು ನನ್ನ ತಿಳಿವಳಿಕೆಯಾಗಿದೆ. ಹೀಗೆ ತಮ್ಮನ್ನು ತಾವು ಮೀರುವ ಪ್ರಾಮಾಣಿಕ ಯತ್ನಗಳು ಬಹುಮುಖವಾಗಿದ್ದು ಹೆಂಗಸರ ಆಧುನಿಕ ವೈಲಕ್ಷಣ್ಯಗಳು ಎಲ್ಲೆಡೆಯಲ್ಲಿ ಚೆದುರಿ ಹೋಗಿರುವುದೇ ಇಂದಿನ ಮಹಿಳಾ ಬರಹಗಾರಿಕೆಯ ಒಂದು ವಾಸ್ತವ. ಈ ಚೆದುರಿಹೋದ ಬಹುಮುಖತ್ವವೂ ಸ್ತ್ರೀ-ಇಲ್ಲವೆ ಪುರುಷ ಎಂಬ ಲಿಂಗಾಂಕಿತ ಮರೆತು ಎಲ್ಲ ಮಾನವರ ಬಗ್ಗೆಯೂ ಮುಂಗಾಣ್ಕೆ ಕೊಡುತ್ತಿದೆ ಎಂಬುದನ್ನೇಕೆ ನಾವು ತಿಳಿದುಕೊಳ್ಳದೆ ಹೋಗುತ್ತಿದ್ದೇವೆ? ನಮ್ಮ ನಿರೀಕ್ಷೆಗಳಿಗೇ ಸತ್ಯವನ್ನು ಏಕೆ ಎರಕ ಹೊಯ್ಯಬೇಕೆಂದು ಹಟತೊಡುತ್ತೇವೆ? ಎಂಬ ಪ್ರಶ್ನೆಯನ್ನು ಸತ್ಯನಾರಾಯಣರೂ ಕೇಳಿಕೊಳ್ಳಬೇಕಲ್ಲವೆ? ಇಷ್ಟು ಹೇಳಿದ ಮೇಲೆ ಕೊನೆಯದಾಗಿ ಒಂದು ಒಗ್ಗರಣೆ :

ಯಾವ ತ್ರಿವೇಣಿ ಆಧುನಿಕ ಹೆಂಗಸಿನ ಎಲ್ಲ ತುಡಿತಗಳಿಗೆ ಮೂಲ ಮಾದರಿಗಳನ್ನು ಕಟ್ಟುವ ಯತ್ನ ಮಾಡಿದ್ದಾರೆಂದು ಸತ್ಯನಾರಾಯಣ ಈಗ ಹೇಳುತ್ತಿದ್ದಾರೋ ಅದೇ ತ್ರಿವೇಣಿ ಅವರನ್ನು ಹಿಂದೆ ಲಂಕೇಶರು ಸದಾ ಹೆಂಗಸರ ಪರವಾಗಿ ವಕಾಲತ್ತು ವಹಿಸುತ್ತಾ, ಅವರ ಎಲ್ಲ ಸಮಸ್ಯೆಗಳಿಗೂ ಪುರುಷರೇ ಕಾರಣರೆಂದು ಆಕ್ರೋಶಿಸುವ ಕೆಟ್ಟ ಕಿರುಚಾಟದ ಲೇಖಕಿಯೆಂದು ಕರೆದದ್ದು ಇದೀಗ ಚರಿತ್ರೆಯಾಗಿದೆ ಎಂಬುದು ಕುತೂಹಲದ ವಿಷಯವಲ್ಲವೆ ?



# ನೂರಿ ಮಾಡಿದ ತಪ್ಪೇನು ?

● *ಹೇಮಲತ ಹೆಚ್.ಎಂ.*

**ಕೆ**ಲವು ದಿನಗಳ ಹಿಂದೆ ಬೆಂಗಳೂರಿನಲ್ಲಿ ಒಂದು ಕಾರ್ಯಾಗಾರವನ್ನು ಮುಗಿಸಿಕೊಂಡು ಮೈಸೂರಿಗೆ ಹೋಗಲು ಸಂಜೆ 7 ಗಂಟೆ ಬಸ್ಸು ಹತ್ತಿದೆ. ಸುಮಾರು 18-20 ವರ್ಷದ ಮುಸ್ಲಿಂ ಹುಡುಗಿ ಕೂತಳು. ಒಂದು ಸಣ್ಣ ಬ್ಯಾಗನ್ನು ತೊಡೆಯ ಮೇಲಿಟ್ಟುಕೊಂಡಿದ್ದಳು. ನೋಡಲು ಸುಂದರವಾಗಿ ಆಕರ್ಷಕವಾಗಿ ಕಂಡಳು. "ಇಷ್ಟು ಚಿಕ್ಕಹುಡುಗಿ ರಾತ್ರಿಯಲ್ಲಿ ಒಬ್ಬಳೆ ಪ್ರಯಾಣಿಸುತ್ತಿದ್ದೀಯ ಭಯವಾಗುದಿಲ್ಲವಾ ?" ಎಂದು ಕೇಳಿದೆ. "ನಾವು ಸರಿಯಾಗಿದ್ದರೆ ಯಾಕೆ ಭಯಪಡಬೇಕು ಆಂಟಿ ? ನನಗೇನು ಭಯವಿಲ್ಲ" ಎಂದು ಪಟ್ಟನೆ ಉತ್ತರಕೊಟ್ಟಳು. ಆದರೂ ಕಣ್ಣಲ್ಲಿ ನೀರು ತುಂಬಿಕೊಂಡಿತು. ಧೈರ್ಯ, ಅಸಹಾಯಕತೆ ಎರಡೂ ಮಿಳಿತಗೊಂಡಿದ್ದವು. ಮತ್ತಷ್ಟು ಕುತೂಹಲದಿಂದ ವಿಷಯವೇನೆಂದು ಕೇಳಿದೆ. ಅವಳು ಹೇಳಿದ ವಿವರ ಹೀಗಿದೆ:

ನೂರಿ ತಂದೆ-ತಾಯಿ ಬೆಂಗಳೂರಿನವರು. ಮೂರುಜನ ಹೆಣ್ಣುಮಕ್ಕಳು. ಆರ್ಥಿಕವಾಗಿ ಅನುಕೂಲವಾಗಿದ್ದಾರೆ. ತಕ್ಕಮಟ್ಟಿಗೆ ಶಿಕ್ಷಿತರಾಗಿದ್ದರೂ ಹೆಣ್ಣುಮಕ್ಕಳ ಜವಬ್ದಾರಿಯಿಂದ ಆದಷ್ಟು ಬೇಗ ಮುಕ್ತರಾಗಬೇಕೆಂದು ಮೊದಲೆರಡು ಹುಡುಗಿಯರಿಗೆ ಚಿಕ್ಕ ವಯಸ್ಸಿಗೆ ನೂರಿ ಎರಡನೆಯವಳು, 13ನೇ ವಯಸ್ಸಿಗೆ ಸಾಕಷ್ಟು ಹಣ ಒಡವೆ ಕೊಟ್ಟು ಮದುವೆ ಮಾಡಿದರು. ಹುಡುಗ ಫರಫ್ಯೂಮ್, ಕೃತಕ ಆಭರಣ, ಮೊಬೈಲ್ ಮಾರಾಟ ಮಾಡುವ ಅಂಗಡಿಯಿಟ್ಟಿದ್ದಾನೆ. ಎರಡು ಹೆಣ್ಣುಮಕ್ಕಳಾದವು. 'ಗಂಡ ಗಂಡುಮಗು ಬೇಕು ಮತ್ತೊಂದು ಮಗು ಮಾಡಿಕೋ' ಎಂದು ಒತ್ತಾಯಿಸತೊಡಗಿದ. ನೂರಿ ಅದಕ್ಕೆ ಒಪ್ಪಲಿಲ್ಲ, ಅಸಮಾಧಾನಗೊಂಡ. ತಂದೆ ತಾಯಿ ಮನೆಯಿಂದ ತಂದ ಒಡವೆಗಳನ್ನು ಬಿಸಿನೆಸ್‌ಗೆ ಎಂದು ತೆಗೆದುಕೊಂಡು ಹೋದ. ಮೊದಲು ಭೋಗ್ಯದ ಮನೆ ಮಾಡಿ ದೊಡ್ಡ ಮನೆಯಲ್ಲಿಟ್ಟಿದ್ದವನು, ಅನಂತರ ಚಿಕ್ಕಮನೆಗೆ ವರ್ಗಾಯಿಸಿದ. ಮನೆಗೆ ಬರುವುದು ಕಡಿಮೆಯಾಯಿತು. ಸಾಮಾನು ತರುವುದು ನಿಂತುಹೋಯಿತು. ಇದನ್ನೆಲ್ಲ ಗಮನಿಸಿದ ನೂರಿ ಅವನ ಚಲನವಲನಗಳನ್ನು ಪರೀಕ್ಷಿಸಲು ಆರಂಭಿಸಿದಳು. ಕಂಡುಬಂದ ವಿಷಯ ಗಂಡ ಮತ್ತೊಬ್ಬ ಮಧ್ಯವಯಸ್ಸಿನ ಹೆಂಗಸಿನೊಂದಿಗೆ ಸಂಬಂಧ ಇರಿಸಿಕೊಂಡಿದ್ದ. ತನ್ನ ಆದಾಯವನ್ನೆಲ್ಲ ಅವಳಿಗೆ ಕೊಡುತ್ತಿದ್ದ. ಇವಳ ಒಡವೆಗಳು ಅವಳ ಮೈಮೇಲಿದ್ದವು. ಇದನ್ನೆಲ್ಲ ಕಂಡ ನೂರಿ ಪ್ರಶ್ನಿಸಿದಾಗ ಗಂಡ ಹಿಂಸಿಸಲು ಪ್ರಾರಂಭಿಸಿದ. ಗಂಡನ ಮೇಲೆ ಅಪಾರ ನಂಬಿಕೆ ಪ್ರೀತಿಯಿಟ್ಟುಕೊಂಡಿದ್ದ ನೂರಿಗೆ ದೊಡ್ಡ ಆಘಾತವಾಯಿತು. ತಂದೆತಾಯಿಗೆ ವಿಷಯ ತಿಳಿಸಿದಳು. ಅಳಿಯನ ಕೆಟ್ಟ ನಡವಳಿಕೆ ಕಂಡ ಅವರು 'ಅವನನ್ನು ಬಿಟ್ಟು ಬಾ ಬೇರೆ ಮದುವೆ ಮಾಡುತ್ತೇನೆ' ಎಂದರು. ಆದರೆ ಮಕ್ಕಳನ್ನು ಅವನ ಬಳಿಯೆ ಬಿಟ್ಟುಬಾ ಎಂದರು.

ಒಮ್ಮೆ ಗಂಡನ ಹಿಂಸೆ ತಾಳಲಾರದೆ ಮಕ್ಕಳನ್ನು ಬಿಟ್ಟು ಬೆಂಗಳೂರಿಗೆ ಹೋದಳು. ಅಲ್ಲಿ ತಂಗಿ ಮದುವೆಯ ಮಾತುಕತೆ ನಡೆಯುತ್ತಿತ್ತು. ತನ್ನಿಂದ ತಂಗಿ ಮದುವೆಗೆ ಅಡ್ಡಿಯಾಗಬಾರದೆಂದು ಮತ್ತು ಮಕ್ಕಳನ್ನು ಅಗಲಿರಲಾರದೆ ಮೈಸೂರಿಗೆ ವಾಪಸ್ಸು ಬಂದಳು.

ನಾನು ಅವಳನ್ನು ಕಂಡ ದಿನ, ಬೆಳಿಗ್ಗೆ ಗಂಡ ಸಣ್ಣ ನೆಪದಿಂದ ಅವಳಿಗೆ ಹೊಡೆದು ಮನೆ ಬಿಟ್ಟು ಹೋಗು ಎಂದಾಗ ಕೋಪದಲ್ಲಿ ಮನೆ ಬಿಟ್ಟುಬಂದು ಬೆಂಗಳೂರಿನ ಬಸ್ ಹತ್ತಿದಳು. ಸಂಜೆ ಆರು ಗಂಟೆಗೆ ಬೆಂಗಳೂರು ತಲುಪಿದವಳು ತಂದೆ ತಾಯಿ ಮನೆಗೆ ಹೋಗಲು ಮನಸ್ಸಾಗದೆ, ಮೂರು ಹಾಗೂ ಒಂದುವರೆ ವರ್ಷದ ಮಕ್ಕಳನ್ನು ಬಿಟ್ಟು ಬಂದಿರುವುದನ್ನು ನೆನೆಸಿಕೊಂಡು ಪುನಃ 7 ಗಂಟೆ ಬಸ್ಸಿಗೆ ಹತ್ತಿದಳು. ಪುಟ್ಟ ಮನಸ್ಸಿನ ಆ ಹುಡುಗಿಯ ಪರಿಸ್ಥಿತಿ ಕಂಡು ನನ್ನಲ್ಲಿ ಅತೀವ ವೇದನೆಯಾಯಿತು. ಬಸ್ ಮೈಸೂರು ತಲುಪಲು 11 ಗಂಟೆಯಾಯಿತು. ಇಷ್ಟು ಹೊತ್ತಿನಲ್ಲಿ ಎಲ್ಲಿಗೆ, ಹೇಗೆ ಹೋಗುತ್ತೀಯ ? ಎಂದು ಕೇಳಿದೆ. 'ಮಕ್ಕಳನ್ನು ಎಲ್ಲಿ ಬಿಟ್ಟಿರುತ್ತಾನೆ ನೋಡುತ್ತೇನೆ, ಅವಳ ಮನೆಯಲ್ಲಿ ಬಿಟ್ಟಿದ್ದರೆ ಕರೆದುಕೊಂಡು ನನ್ನ ಮನೆಗೆ ಹೋಗುತ್ತೇನೆ. ನಾನು ಅವನನ್ನು ಸುಲಭವಾಗಿ ಬಿಡುವುದಿಲ್ಲ. ಸರಿಯಾಗಿ ನೋಡಿಕೊಳ್ಳುತ್ತಾನಾ ಕೇಳುತ್ತೇನೆ. ನಮ್ಮ ಜನರನ್ನು ಸೇರಿಸಿ ಜೀವನಾಂಶ ಕೊಡಿಸುವಂತೆ ಕೇಳಿಕೊಳ್ಳುತ್ತೇನೆ. ಇಲ್ಲ ಅಂದರೆ ಮಕ್ಕಳನ್ನು ಕರೆದುಕೊಂಡು ಬೆಂಗಳೂರಿಗೆ ಹೋಗುತ್ತೇನೆ. ನನಗೆ ತಂದೆತಾಯಿಗಳಿಗೆ ಭಾರವಾಗಲು ಇಷ್ಟವಿಲ್ಲ, ಹೇಗೂ ಸೆಕೆಂಡ್ ಓದಿದ್ದೇನೆ (8ನೇ ತರಗತಿವರೆಗೆ) ಯಾವುದಾದರು ಗಾರ್ಮೆಂಟ್ಸ್ ಫ್ಯಾಕ್ಟರಿಯಲ್ಲಿ ಕೆಲಸಕ್ಕೆ ಸೇರುತ್ತೇನೆ. ಬಂದ ಸಂಬಳವನ್ನು ತಂದೆತಾಯಿಗೆ ಕೊಟ್ಟು ಮಕ್ಕಳನ್ನು ನೋಡಿಕೊಳ್ಳುವಂತೆ ಕೇಳಿಕೊಳ್ಳತ್ತೇನೆ, ಎಂದು ಹೇಳಿದಳು. ಅವಳ ಧೈರ್ಯ, ಛಲವನ್ನು ಕಂಡು ಆಶ್ಚರ್ಯವಾಯಿತು. ಒಂದು ವೇಳೆ ತುಂಬ ತೊಂದರೆಯಾದರೆ ಸಂಪರ್ಕಿಸು ಎಂದು ಸಮತಾ ವೇದಿಕೆಯ ವಿಳಾಸ ನೀಡಿದೆ. ನನ್ನ ಮೊಬೈಲ್ ನಂಬರನ್ನು ಕೊಟ್ಟೆ. ಪ್ರಪಂಚವನ್ನು ತಿಳಿಯುವ ಮುನ್ನವೇ, ಇಷ್ಟೆಲ್ಲ ಕಷ್ಟ ನೋವುಗಳನ್ನು ಅನುಭವಿಸುತ್ತಿರುವ ನೂರಿ ಮಾಡಿದ ತಪ್ಪಾದರು ಏನು ?

# ಸ್ವಾತಂತ್ರ್ಯೋತ್ತರ ಕನ್ನಡ ಮಹಿಳಾ ಕಾವ್ಯ

• *ಡಾ. ವಿನಯಾ*

**ಪ್ರವೇಶಿಕೆ :** ಹೆಣ್ಣಿನ ಸಂವೇದನಾ ಸಾಧ್ಯತೆಯನ್ನು ರೂಪಿಸಿದ ಮತ್ತು ನಿಯಂತ್ರಿಸಿದ ಸಾಮಾಜಿಕ ಚರಿತ್ರೆಯಲ್ಲಿ ಅವಳ ಸೃಜನಶೀಲತೆಗೆ ಪೂರಕ ವಾತಾವರಣ ದೊರೆಯಲಿಲ್ಲ. ಹೆಣ್ಣನ್ನು ಭೋಗದ ಸರಕೆಂದು ತಿಳಿಯುತ್ತ ಬಂದ ತಿಳಿವು ಪವಾಡ ಸದೃಶವಾಗಿ ಬದಲಾಗುವುದಲ್ಲ. ಇಂದಿಗೂ ಸಾಮಾಜಿಕವಾಗಿ ಹೆಣ್ಣಿನ ಪಾತ್ರಗಳು ಬದಲಾಗಿವೆಯೇ ವಿನಃ ಅವಳ ಸಾಮಾಜಿಕ ಪಾಲುದಾರಿಕೆಯಲ್ಲಿ ಅಂತಹ ಬದಲಾವಣೆಗಳಾಗಲಿಲ್ಲ. ಇದಕ್ಕೆ ಕಾರಣ ಬದುಕನ್ನು ಕುರಿತ ಆಲೋಚನಾ ವಿಧಾನವೇ ಪುರುಷ ಹಿತಾಸಕ್ತವಾಗಿರುವುದು ಮತ್ತು ಏಕಪಕ್ಷೀಯವಾಗಿರುವುದು. ಆದ್ದರಿಂದ ಹೆಣ್ಣಿನ ಅಭಿವ್ಯಕ್ತಿಯನ್ನು ಒಂದು ಪರಂಪರೆಂಯೊಂದಿಗೆ ಜೋಡಿಸಿಕೊಳ್ಳುವುದಾಗಲಿ, ಪರಂಪರೆಯನ್ನು ಕಟ್ಟಿಕೊಳ್ಳುವುದಾಗಲಿ ಸುಲಭವಾಗಿರಲಿಲ್ಲ. ಇಂಥದ್ದೊಂದು ಅಸ್ಮಿತೆಯ ಅಗತ್ಯ ಕಂಡುಬಂದದ್ದೇ ಸ್ತ್ರೀವಾದಿ ಚಿಂತನೆಗಳ ಫಲವಾಗಿ. ಅದುವರೆಗೂ 'ಇದೆ' ಅಥವಾ 'ಇಲ್ಲ' ಎಂಬ ಧೋರಣೆಯಲ್ಲಿ ಚಲಿಸಿದ ಸಾಹಿತ್ಯ ಚರಿತ್ರೆಯನ್ನು 'ಯಾಕೆ ಇದೆ' ಅಥವಾ 'ಯಾಕೆ ಇಲ್ಲ' ಎಂಬ ಉಪ ಪ್ರಶ್ನೆಗಳ ಮೂಲಕ 'ಓದಿಕೊಳ್ಳುವಿಕೆ' ಆರಂಭವಾಯಿತು. ಆಗ, ವರ್ತಮಾನವನ್ನು ಹತ್ತಿಕ್ಕುವ ಮುಖ್ಯ ತಂತ್ರವಾಗಿ ಚರಿತ್ರೆಯನ್ನು ಇಲ್ಲವಾಗಿಸಲಾಗುತ್ತದೆಂಬ ಅರಿವು ಬೆಳೆಯತೊಡಗಿತು. ಚರಿತ್ರೆಯನ್ನು ಪುನರ್‌ರೂಪಿಸಿಕೊಳ್ಳಬೇಕಾದ ಜರೂರು ಅಸ್ತಿತ್ವದ ಪ್ರಶ್ನೆಯಾಗಿ ಕಾಣತೊಡಗಿತು. ಸ್ವಾತಂತ್ರ್ಯಾನಂತರದ ಕಾಲದಲ್ಲಿ ಹಲವು ಜ್ಞಾನ ವಲಯಗಳಲ್ಲಿ, ಕ್ರಿಯಾ ವಿಧಾನಗಳಲ್ಲಿ ಪ್ರವೇಶ ಪಡೆದ ಮಹಿಳಾ ಪ್ರಜ್ಞೆಗೆ ಮುಜುಗರ ಮತ್ತು ಬೇರುಗಳೇ ಇಲ್ಲದ ಅತಂತ್ರ ಸ್ಥಿತಿ ದತ್ತವಾಗಿತ್ತು. ಇದು ಕೇವಲ ಸಾಹಿತ್ಯ ಅಥವಾ ಕಲೆಗೆ ಸೀಮಿತವಾದದ್ದಾಗಿರಲಿಲ್ಲ. ಶಿಕ್ಷಣ, ವಿಜ್ಞಾನ, ತಂತ್ರಜ್ಞಾನ, ಉದ್ಯೋಗ ಹೀಗೆ ಎಲ್ಲ ವಲಯಕ್ಕೆ ಸಂಬಂಧಿಸಿದ್ದಾಗಿತ್ತು.

ಸಾಹಿತ್ಯ ಕ್ಷೇತ್ರದಲ್ಲಿ ಈ ಪ್ರಶ್ನೆಯನ್ನು ಅತ್ಯಂತ ತಾತ್ವಿಕವಾಗಿ ಮತ್ತು ನಿಖರವಾಗಿ ಮಹಿಳಾ ಅಧ್ಯಯನ ವಿಧಾನವು ನಿರ್ವಹಿಸಿದೆ. ಸಾಮಾನ್ಯ ಮನುಷ್ಯನ ಸಂವೇದನೆಗಳೇ ಗೈರುಹಾಜರಾದ ಪ್ರಾಚೀನ ಸಾಹಿತ್ಯದಲ್ಲಿ ಸಾಮಾನ್ಯರಲ್ಲಿ ಸಾಮಾನ್ಯರಾದ ಮಹಿಳೆಯರ ಸಂವೇದನೆಗಳು ವ್ಯಕ್ತಗೊಳ್ಳುವುದು ಸಾಧ್ಯವಿರಲಿಲ್ಲ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಕಥನಗಳು ಮತ್ತು ಪಾತ್ರಗಳು ಪುರುಷ ಹಿತಾಸಕ್ತಿಗೆ ಪೂರಕವಾದುವುಗಳು, ಪುರುಷ ಕೇಂದ್ರದ ಪರಿಧಿಗಳು. ಆದ್ದರಿಂದ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಸಂವೇದನೆಯ ಕುರಿತ ನಿರ್ಲಿಪ್ತತೆಯಿದೆ.

ಸ್ವಾತಂತ್ರ್ಯ ಚಳವಳಿ ಈ ನೆಲದ ಚಿಂತನಾವಿಧಾನವನ್ನು ಬದಲಿಸಿತು. ವಿಸ್ತಾರಗೊಳಿಸಿತು. ಅಖಂಡ ರಾಷ್ಟ್ರದ ಕಲ್ಪನೆಯೊಂದಿಗೆ ಸಂಸ್ಕೃತಿ, ಭಾಷೆ, ಸಾಹಿತ್ಯ, ಕಲೆಗಳ ಕುರಿತ ಪ್ರಜ್ಞೆಯೂ ಮೊಳೆಯಿತು. ರಾಜಕೀಯ ಆಕ್ರಮಣದೊಂದಿಗೆ ನಡೆಯುವ ಸಾಂಸ್ಕೃತಿಕ ಆಕ್ರಮಣವನ್ನು ಎದುರಿಸಲು ಸ್ವಸಂಸ್ಕೃತಿಯನ್ನು ನಿರ್ಮಿಸಿಕೊಳ್ಳುವ ಅಗತ್ಯ ಕಂಡುಬಂತು. ದಮನಿತ ಸಂಸ್ಕೃತಿಗಳಿಗೆ ಜೀವದಾನ ಪ್ರಕ್ರಿಯೆ ಆರಂಭವಾಯಿತು. ಮಹಿಳಾ ಬದುಕನ್ನು ಮಾನವೀಯವಾಗಿ ಪುನರ್‌ರೂಪಿಸುವ 'ಹಿಂದೂ ಪುನರುತ್ಥಾನವಾದೀ ಚಳವಳಿ'ಗಳು ಆರಂಭವಾದವು. ಬಾಲ್ಯವಿವಾಹ, ಸತೀ ಪದ್ಧತಿ, ಕೇಶಮುಂಡನ, ವಿಧವಾ ಪದ್ಧತಿಗಳ ನಿಷೇಧ ಪ್ರಯತ್ನ ಪ್ರಾರಂಭವಾಯಿತು. ಮಹಿಳಾ ಶಿಕ್ಷಣದ ಕಲ್ಪನೆ ಆರಂಭವಾಯಿತು. ಆದರೆ ಈ ಎಲ್ಲ ಪ್ರಯತ್ನಗಳು ಮಹಿಳೆಯ ಬಿಡುಗಡೆ ಮತ್ತು ಸ್ವಾತಂತ್ರ್ಯವನ್ನು ಗಮನದಲ್ಲಿಟ್ಟುಕೊಂಡಿರಲಿಲ್ಲ. ಬದಲಾಗಿ ಪುರುಷ ಪ್ರಧಾನ ಸಾಮಾಜಿಕತೆಯನ್ನು ಆರೋಪಮುಕ್ತಗೊಳಿಸುವ ಉದಾರವಾದಿ ಚಿಂತನೆಯನ್ನು ಗಮನದಲ್ಲಿಟ್ಟುಕೊಂಡಿತ್ತು ಮತ್ತು ಇದರ ಅಂತಿಮ ಗುರಿ ರಾಜಕೀಯ ಸ್ವಾತಂತ್ರ್ಯವನ್ನು ಪಡೆಯುವುದಾಗಿತ್ತು. ಮುಂಬೈ ಗೆಜೆಟ್‌ನಲ್ಲಿ "ಹೆಣ್ಣುಮಕ್ಕಳು ಒಳ್ಳೆಯ ಹೆಂಡತಿಯರಾಗಲು ಮತ್ತು ಒಳ್ಳೆಯ ತಾಯಂದಿರಾಗಲು ಅವರಿಗೆ ಶಿಕ್ಷಣವನ್ನು ನೀಡಬೇಕು" ಎಂಬ ವಿಷಯ ದಾಖಲಾಗಿದೆ. ಹೀಗೆ ಪುರುಷ ಹಿತಾಸಕ್ತ ಮತ್ತು ಪೂರಕ ಪಾತ್ರಗಳಿಗೆ ಹೆಚ್ಚು ಮುತುವರ್ಜಿಯಿಂದ ಸನ್ನದ್ಧಗೊಳಿಸೋ ಈ ವ್ಯವಹಾರದಲ್ಲಿ ಮಹಿಳಾ ಸಂವೇದನೆಯ ಸಹಜ ವಿಕಾಸ ಸಾಧ್ಯವಾಗಲಿಲ್ಲ. ಮಹಿಳೆ ಪರಂಪರೆಯಿಂದ ದತ್ತವಾದ ಪಾತ್ರಗಳನ್ನು ನಿರ್ವಹಿಸಿಕೊಳ್ಳುತ್ತಲೇ ಮುಂಚಾಚಬೇಕಾದ ಸ್ಥಿತಿ 'ಸಹಜ' ಎಂಬಂತಾಯಿತು. ಆದರೆ ಮಹಿಳಾ ಚರಿತ್ರೆಯಲ್ಲಿ ಅನ್ಯ ಕಾರಣಕ್ಕಾಗಿ ನಡೆದ ಈ ಸಣ್ಣ ಚಲನೆಯೂ ಚರಿತ್ರಾರ್ಹವಾಯಿತು.

ವಸಾಹತುಶಾಹಿ ಶಿಕ್ಷಣ ವ್ಯವಸ್ಥೆಯ ಅವಕಾಶವನ್ನು ಪಡೆದುಕೊಂಡ ಬೆರಳೆಣಿಕೆಯ ಮೇಲ್ಜಾತಿ - ಮೇಲ್ವರ್ಗದ ಮಹಿಳೆಯರು ತಮ್ಮ ಅನುಭವಲೋಕವನ್ನೇ ಮುಂದಿಟ್ಟುಕೊಂಡು ಸ್ತ್ರೀ ಸಂಕಥನವನ್ನು ರೂಪಿಸಲು ತೊಡಗಿದರು. ತಿರುಮಲಾಂಬಾ, ಕಲ್ಯಾಣಮ್ಮ, ಬೆಳಗೆರೆ ಜಾನಕಮ್ಮ, ಶ್ಯಾಮಲಾ ದೇವಿ ಬೆಳಗಾಂವಕರ, ಸರಸ್ವತಿಬಾಯಿ ರಾಜವಾಡೆ, ಎಚ್.ವಿ. ಸಾವಿತ್ರಮ್ಮ ಮೊದಲಾದ ಲೇಖಕಿಯರ ಪರಿಶ್ರಮ ಅಲಕ್ಷಿಸುವಂತಿರಲಿಲ್ಲ. ಆದರೆ ನಮ್ಮ ಸಾಹಿತ್ಯ ಚರಿತ್ರೆಯಲ್ಲೆಲ್ಲೂ ಇವು ದಾಖಲಾಗಲಿಲ್ಲ. ಅಚ್ಚರಿಯ ಕಥನ ಸಾಮರ್ಥ್ಯ ತೋರಿದ ಶ್ಯಾಮಲಾದೇವಿ, ದೇಶ ವಿಭಜನೆಯ ಕರಾಳ ಮುಖವನ್ನು ದಟ್ಟವಾಗಿ ಕಟ್ಟಿಕೊಟ್ಟ ಸಾವಿತ್ರಮ್ಮನಂಥವರ ಉಲ್ಲೇಖ ಕೂಡ ನಮ್ಮ ಸಾಹಿತ್ಯ ಚರಿತ್ರಕಾರರಿಗೆ ಮುಖ್ಯವೆನಿಸಲಿಲ್ಲ. ಪ್ರಧಾನ ಸಾಹಿತ್ಯ ಚರಿತ್ರೆಯು ಕೊಡಗಿನ ಗೌರಮ್ಮ ಮತ್ತು ತ್ರಿವೇಣಿಯವರನ್ನು ಮಾತ್ರ ಉಲ್ಲೇಖಿಸಿ ಒಂದು ಗ್ಯಾಪ್‌ಅನ್ನು ನಿರ್ಮಾಣ ಮಾಡುತ್ತದೆ. ಪ್ರಧಾನ ಸಾಹಿತ್ಯ ಚರಿತ್ರೆಯಲ್ಲಿ ಕಂಡುಬರುವ ನಿರ್ಲಕ್ಷ್ಯ ಮತ್ತು ಉಲ್ಲೇಖಗಳೆರಡೂ ಪಿತೃವ್ಯವಸ್ಥೆಯ ಸಾಂಸ್ಕೃತಿಕ ರಾಜಕಾರಣವಾಗಿದೆ. ಇಂತಹ ವರ್ತಮಾನದ 'ಓದುಗಳು ಮಹಿಳಾ ಸಾಹಿತ್ಯ ಅಧ್ಯಯನಕಾರರನ್ನು ಪೂರ್ವ ದಾಖಲೆಗಳ' ಮರುಓದುವಿಕೆಗೆ ಒತ್ತಾಯಿಸುತ್ತವೆ. "ವಚನಕಾರ್ತಿಯರಲ್ಲಿ ಅಕ್ಕನ ಬಹಳ ವಚನಗಳು, ಸೂಳೆ ಸಂಕವ್ವೆಯ ಒಂದು ವಚನ ಉಪಲಬ್ಧವಾಗಿದೆ" - ಎಂಬ ಸತ್ಯವನ್ನು ಬಹುಮುಖಿ ಸಾಧ್ಯತೆಗಳತ್ತ ಹೊರಳಿಸಬೇಕಾಗುತ್ತದೆ. ಇಂತಹ ಹಲವು ಸಾಧ್ಯತೆಗಳಲ್ಲಿಯೇ ಮಹಿಳಾ ಅಧ್ಯಯನ ನಡೆಯಬೇಕಾಗುತ್ತದೆ. ಮಹಿಳಾ ಅಭಿವ್ಯಕ್ತಿ ಕೂಡ ಇಂತಹ ತಳಮಳಗಳನ್ನು, ಉಪೇಕ್ಷೆಗಳನ್ನು ಒಡಲೊಳಗಿಟ್ಟುಕೊಂಡೇ ಬೆಳೆದಿದೆ. ಮಹಿಳಾ ಸಂವೇದನೆ

ಬದುಕಿನೊಂದಿಗೆ ನಡೆಸಿದ ಅನುಸಂಧಾನಗಳು ಕೂಡ ಪುರುಷ ಚಿಂತನೆಯಿಂದಲೇ ಪ್ರಭಾವಿತವಾಗಿತ್ತು. ಇದರ ಪರಿಣಾಮವಾಗಿ ಪ್ರತಿಭಟನಾತ್ಮಕ ಮತ್ತು ಮುಕ್ತ ಸಂವೇದನೆಗಳು ಪುರುಷ ದೃಷ್ಟಿಯಿಂದಲೇ ವಿವೇಚಿಸಲ್ಪಟ್ಟವು. ಇಂತಹ ವಿಷಾದ ವ್ಯಂಗ್ಯಗಳಲ್ಲಿಯೂ, ಸಣ್ಣ ನೆಲೆಯಲ್ಲೇ ಆದರೂ ಗಟ್ಟಿ ಚಲನೆಯೊಂದು ಏರ್ಪಟ್ಟಿದ್ದನ್ನು ಅಲ್ಲಗಳೆಯ ಲಾಗುವುದಿಲ್ಲ. ಮಹಿಳಾಸಾಹಿತ್ಯ ಪ್ರಧಾನಸಾಹಿತ್ಯ ಪರಂಪರೆಯಿಂದ ಪ್ರತ್ಯೇಕತೆಯನ್ನು ಕಾಯ್ದುಕೊಂಡೇ ಬಂದಿದೆ. ಈ ಪ್ರತ್ಯೇಕತೆಯೇ ಮಹಿಳಾ ಸಾಹಿತ್ಯದ ಬೆಡಗಾಗಿದೆ.

**ಸ್ವಾತಂತ್ರ್ಯೋತ್ತರ ಮಹಿಳಾ ಕಾವ್ಯದ ಬೇರುಗಳು :**

ಸ್ವಾತಂತ್ರ್ಯೋತ್ತರದಲ್ಲಿ ಅದರಲ್ಲೂ ೮೦-೯೦ರ ದಶಕದಲ್ಲಿ ಮಹಿಳಾ ಅಭಿವ್ಯಕ್ತಿಗೆ ಅಬ್ಬರದ ಅಲೆ ಬಂತು. "ಕನ್ನಡ ಕಾವ್ಯದಲ್ಲಿ ಏನಾದರೂ ಹೊಸತು ಆಗುತ್ತಿದ್ದರೆ ಅದು ಮಹಿಳೆಯರಿಂದ ಮಾತ್ರ ಎಂದು ಹೇಳಲು ನನಗೆ ಸಂಕೋಚವಾಗುತ್ತಿಲ್ಲ" ('ಆಹಾ ಪುರುಷಾಕಾರಂ'ದ ಮುನ್ನುಡಿಯಲ್ಲಿ ಪ್ರತಿಭಾ ನಂದಕುಮಾರ್) ಎನ್ನುವ ಅಭಿಪ್ರಾಯವನ್ನು ಗಮನಿಸಬಹುದು. ಕನ್ನಡದ ಹಿರಿಯ ವಿಮರ್ಶಕರಾದ ಡಾ. ಜಿ.ಎಸ್. ಶಿವರುದ್ರಪ್ಪನವರು ಆಧುನಿಕ ಮಹಿಳಾ ಕಾವ್ಯವನ್ನು ಅಕ್ಕನ ಪರಂಪರೆ ಮತ್ತು ಸಂಚಿ ಹೊನ್ನಮ್ಮನ ಪರಂಪರೆ ಎಂದು ಗುರುತಿಸುತ್ತಾರೆ. ಮಹಿಳಾ ಕಾವ್ಯ ಜಾನಪದ ಮಹಿಳಾ ಸಾಹಿತ್ಯದಿಂದಲೂ ತನ್ನ ಕಸುವನ್ನು ಹೀರಿ ಬೆಳೆಯಿತು. ಜಾನಪದ ಮಹಿಳಾ ಸಂವೇದನೆ ವ್ಯವಸ್ಥೆಯ ನಿಲುವುಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತದೆ. ಆದರೆ ವ್ಯವಸ್ಥೆಯ ತೀರ್ಮಾನಗಳಿಗೆ ಸಹಮತವನ್ನು ವ್ಯಕ್ತಪಡಿಸುವುದಿಲ್ಲ. ಹೆಣ್ಣಿನ ಅಸ್ತಿತ್ವವನ್ನು ನಿರಾಕರಿಸುವ ಕೌಟುಂಬಿಕ ಸಾಮಾಜಿಕ ಚೌಕಟ್ಟಿನ ಪರಿವೆಯಿದ್ದೂ, ತನ್ನ ಭಾವಲೋಕವನ್ನು ಪ್ರತ್ಯೇಕವಾಗಿ ಕಾಯ್ದುಕೊಳ್ಳುತ್ತದೆ. ಪ್ರಧಾನ ವಾಹಿನಿಯೊಂದಿಗೆ ಮಹಿಳಾ ಸಂವೇದನೆ ಕೈಜೋಡಿಸಿದ ಮೊದಲ ಉದಾಹರಣೆ ಕನ್ನಡದ ಮಟ್ಟಿಗೆ ವಚನಕಾರ್ತಿಯ ರದ್ದು. ಈ ನೆಲದಲ್ಲಿ ಮಹಿಳಾ ಸಮಾನತೆಯ ಮೊದಲ ಧ್ವನಿ ರೂಪುಗೊಳ್ಳುವಾಗ ದೇಹಬದ್ಧ ಚಿಂತನಾಕ್ರಮಗಳು ಜೀವ ಬದ್ಧತೆಯ ಕಡೆಗೆ ಹೊರಳಿತು. ಎಂತಹ ವಿಷಾದದಲ್ಲೂ 'ನನ್ನ ಕಾಲಿನ ಮುಳ್ಳ ನಾನೇ ತೆಗೆಯಬೇಕಲ್ಲದೆ ಅನ್ಯರಲ್ಲ' ಎಂಬ ದೃಢತೆ ಆಧುನಿಕ ಮಹಿಳಾ ಸಂವೇದನೆಯ ಆದ್ಯತೆ ಯಾಗಿ ಮುನ್ನಡೆಯಿತು.

ಇಪ್ಪತ್ತನೆಯ ಶತಮಾನದ ವಸಾಹತುಶಾಹಿ ವ್ಯವಸ್ಥೆ, ಸ್ವಾತಂತ್ರ್ಯ ಸಂಗ್ರಾಮ, ಸಾರ್ವತ್ರಿಕ ಶಿಕ್ಷಣ, ಕೈಗಾರಿಕೀಕರಣ, ರಾಷ್ಟ್ರೀಯ ಪುನರುತ್ಥಾನ ವಾದೀ ಚಳವಳಿಗಳು ಮಹಿಳೆಯ ಸಾಂಸ್ಕೃತಿಕ ಅಸ್ಪೃಶ್ಯತೆಯನ್ನು ಸಾಂಕೇತಿಕವಾಗಿ ನಿವಾರಿಸಿದವು. ಸಾಹಿತ್ಯದ ಪ್ರಧಾನ ಪರಂಪರೆಯಿಂದ ಪ್ರೇರಣೆ ಪ್ರಭಾವಗಳನ್ನು ಪಡೆದೂ; ಮಹಿಳಾ ಸಂವೇದನೆ ಪ್ರತಿಭಟನಾತ್ಮಕವಾಗಿಯೇ ಬೆಳೆದು ಬಂದಿದೆ. ಹಾಗಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಎಂಬ ಸಿದ್ಧ ವಿಂಗಡನಾ ಕ್ರಮದಲ್ಲಿ ಮಹಿಳಾ ಸಾಹಿತ್ಯವನ್ನು ವಿಶ್ಲೇಷಿಸುವುದು ಸಾಧ್ಯವಿಲ್ಲ. ಕನ್ನಡ ನವೋದಯ ಪರಂಪರೆ ಹೆಣ್ಣಿನ ಆದರ್ಶದ ರೂಪವನ್ನು, ಆರ್ಯನಾರಿತ್ವ ವನ್ನು ನಿರ್ವಚಿಸತೊಡಗಿದಾಗ, ಲೇಖಕಿಯರು ಹೆಣ್ಣಿನ ಸಮಸ್ಯೆ ಮತ್ತು ಏಕಮುಖ ಒತ್ತಡದ ಬಗ್ಗೆ ಮಾತಾಡುವುದನ್ನು ಆದ್ಯತೆಯಾಗಿ ಸ್ವೀಕರಿಸುತ್ತಾರೆ. ಪ್ರಧಾನ ಸಾಹಿತ್ಯ ದಾಂಪತ್ಯವನ್ನು - ಗೃಹದೇವತೆಯನ್ನು ವೈಭವಿಸುತ್ತಿದ್ದಾಗ ಬೆಳಗೆರೆ ಜಾನಕಮ್ಮನಂತಹ ಕವಯಿತ್ರಿ ಹೆಣ್ಣಿನ ಅನುಭವ ಕಥನವನ್ನು ಅನಾವರಣಗೊಳಿಸುತ್ತಾರೆ -

> ಹೆಣ್ಣೆ ನೀ ಗಂಡನ ಕೂಡಿಕೊಂಡ್ಯ
> ನೋಡು ಮಂಡೂಕ ಸರ್ಪದ ನೆಳಲಿಗೆ ಹೋದಂತೆ
> ಬಂಡೆಗೆ ಬಸವನು ಶಿರಬಾಗಿಕೊಂಡಂತೆ

ಆಧುನಿಕ ಕನ್ನಡ ಸಾಹಿತ್ಯದ ಮೊದಲ ದಶಕಗಳಲ್ಲಿ ಕನ್ನಡ ಮಹಿಳಾ ಸಂವೇದನೆ ಹೆಚ್ಚು ಗದ್ಯಮುಖಿಯಾಗಿತ್ತು. ಬೆಳಗೆರೆ ಜಾನಕಮ್ಮ, ಭಾರತಿ, ಜಯದೇವಿತಾಯಿ ಲಿಗಾಡೆಯವರಂಥ ಕೆಲವರನ್ನು ಹೊರತುಪಡಿಸಿದರೆ ಉಳಿದವರು ಕಥೆ-ಕಾದಂಬರಿಗಳನ್ನೇ ಆಯ್ದುಕೊಂಡರು. ಕಾವ್ಯದಲ್ಲಿ ತೊಡಗಿಸಿಕೊಳ್ಳುವುದಕ್ಕೆ ಕೆಲವು ಕಾಲವೇ ಬೇಕಾಯಿತು. ಅಭಿವ್ಯಕ್ತಿಯ ರೋಮಾಂಚಕತೆಯಲ್ಲಿ ತೊಡಗಿಸಿಕೊಂಡ ಮೊದಲ ಹಂತದ ಸಂಭ್ರಮ, ಅಪಾರ ಅನುಭವ ಲೋಕವನ್ನು ಅನಾವರಣಗೊಳಿಸುವ ತುರ್ತು, ಸಾಹಿತ್ಯದ ಪ್ರಧಾನ ಧಾರೆಯ ಸೂಕ್ಷ್ಮ ಕುಶಲತೆಯನ್ನು



ಸರಿದೂಗಿಸಿಕೊಳ್ಳಲಾದೀತೆ ಎಂಬ ಆತಂಕ ಹೀಗೆ ಹಲವು ಕಾರಣಗಳು ಇದಕ್ಕೆ ಕಾರಣವಾಗಿರಬಹುದು. ಒಟ್ಟಾರೆ ಮೊದಲ ಹಂತದ ಮಹಿಳಾ ಸಂವೇದನೆ ಗದ್ಯದಲ್ಲಿಯೇ ತನ್ನ ಅಸ್ತಿತ್ವವನ್ನು ಕಂಡುಕೊಂಡಿದೆ. ಆದರೆ ಬಂಡಾಯ ಸಾಹಿತ್ಯ ಚಳವಳಿ ಮತ್ತು ಸ್ತ್ರೀವಾದಿ ಚಿಂತನೆಗಳು ಮಹಿಳಾ ಸಂವೇದನೆಗೆ ಒತ್ತಾಸೆಯನ್ನು ನೀಡಿದವು. ಮಹಿಳೆಯ ಬದುಕಿನಲ್ಲಿ ಶಿಕ್ಷಣ ಮತ್ತು ಉದ್ಯೋಗಗಳಿಂದಾಗಿ ನಡೆದ ಸಂಚಲನೆ ಕೂಡ ಅವಳ ಅನುಭವ ಸಾಧ್ಯತೆಯನ್ನು ವಿಸ್ತರಿಸಿತು. ಪರಂಪರೆಯಿಂದ ಮುಗ್ಧವಾಗಿ ಜ್ಞಾನವನ್ನು ಸ್ವೀಕರಿಸುವ ಕ್ರಮಕ್ಕಿಂತ, ಅನ್ಯ ಶಿಸ್ತುಗಳ ಮೂಲಕ ದತ್ತವಾದ ಜ್ಞಾನದಿಂದ ಪರಂಪರೆಯನ್ನು ಪರಿಶೀಲಿಸುವ ಕ್ರಮ ನಡೆಯಿತು. ಸ್ತ್ರೀವಾದಿ ಚಿಂತನೆಗಳು ಮತ್ತು ಮಹಿಳಾ ಚಳವಳಿಗಳು ನೀಡಿದ ಪ್ರೇರಣೆ ಒಂದೆಡೆ, ಇನ್ನೊಂದೆಡೆ ಸಾಹಿತ್ಯದ ಪ್ರಧಾನ ಧಾರೆಯಲ್ಲಿಯೇ ಕಂಡುಬಂದ ಮಹಿಳಾ ಪರ ನಿಲುವುಗಳು, ವೈಚಾರಿಕ ಬದ್ಧತೆಗಳ ಪರಿಣಾಮದಿಂದ

ಮಹಿಳಾ ಬರವಣಿಗೆಯ ಸಶಕ್ತ ಮಾದರಿ ವ್ಯಕ್ತವಾಯಿತು. ಆಧುನಿಕ ಕನ್ನಡ ಕಾವ್ಯಕ್ಕೆ ಮಹಿಳಾ ಸಂವೇದನೆ ಸೇರ್ಪಡೆಯಾದ ವಿಧಾನವನ್ನು ಡಾ. ಕೆ.ವಿ. ನಾರಾಯಣ ಅವರು ಹೀಗೆ ವಿಶ್ಲೇಷಿಸುತ್ತಾರೆ - "ಪ್ರಚಲಿತ ಕೌಟುಂಬಿಕ ಚೌಕಟ್ಟನ್ನು ಒಪ್ಪಿ ಬರೆದವರು ಕಥೆ/ಕಾದಂಬರಿಗಳನ್ನು ರಚಿಸುತ್ತಾರೆ. ವೈಯಕ್ತಿಕತೆಯ ಅರಿವು ತೀವ್ರವಾದವರು ಕಾವ್ಯ ರಚಿಸುತ್ತಾರೆ." ಈ ಮಾತು ಮಹಿಳಾ ಸಂವೇದನೆಯ ಅಸ್ತಿತ್ವವಾದಿ ಪ್ರಜ್ಞೆ ಕಾವ್ಯದಲ್ಲಿ ಮೈದಳೆದಿದ್ದನ್ನು ಹೇಳುತ್ತದೆ. "ಕಾವ್ಯದತ್ತ ಮಹಿಳೆಯರಲ್ಲಿ ಹೆಚ್ಚು ಆಸಕ್ತಿ ಹುಟ್ಟಿರುವುದಕ್ಕೂ, ಸಾಮಾಜಿಕವಾಗಿ ತಮ್ಮ ಅಸ್ತಿತ್ವ ಸಮರ್ಥನೆಯ ಅವಶ್ಯಕತೆಯನ್ನವರು ಗ್ರಹಿಸಿರುವುದಕ್ಕೂ ಸಂಬಂಧವಿದೆ" - ಎನ್ನುತ್ತಾರೆ ಡಾ. ಬಿ.ಎನ್. ಸುಮಿತ್ರಾಬಾಯಿ. ಸಾಮಾಜಿಕ ಬದುಕಿನಲ್ಲಿ ಮಹಿಳೆಯರು ದೊಡ್ಡಪ್ರಮಾಣದಲ್ಲಿ ಎದುರಿಸಿದ 'ಐಡೆಂಟಿಟಿ'ಯ ಪ್ರಶ್ನೆಯನ್ನು ಮಹಿಳಾ ಕಾವ್ಯ ನಿರ್ವಚಿಸಿದ ಕ್ರಮವನ್ನಿದು ಹೇಳುತ್ತದೆ. "ಪುರುಷ ವಿಮರ್ಶೆ ನೀಡಿದ ಅನುಭವದ ಪ್ರಾಮಾಣಿಕತೆ ಎಂಬ ಮಾನದಂಡವು ಕಥೆ ಕಾದಂಬರಿಗಳಂತಹ ಪ್ರಕಾರಗಳಲ್ಲಿ ತೊಡಗಲು ಅಡ್ಡಿಯಾಗಿತ್ತು" - ಎಂದು ಡಾ. ಎಚ್.ಎಸ್. ಶ್ರೀಮತಿಯವರು ಗುರುತಿಸುತ್ತಾರೆ. ಹೀಗೆ ಸಾಮಾಜಿಕ ಪಲ್ಲಟ, ಮಹಿಳೆಯ ಅಸ್ತಿತ್ವವಾದೀ ಪ್ರಜ್ಞೆ ಮತ್ತು ಪ್ರಧಾನ ಸಾಹಿತ್ಯ-ವಿಮರ್ಶೆಯ ಪರಿಕಲ್ಪನೆಗಳು ಜೊತೆಯಾಗಿ ಮಹಿಳಾ ಕಾವ್ಯ ಚರಿತ್ರೆಗೆ ಕಾರಣವಾದವು. ಹಲವು ಧರ್ಮ, ಜಾತಿ, ಕುಲಮೂಲಗಳಿಂದ, ಹಲವು ಭಿನ್ನಭಿನ್ನ ಅಧ್ಯಯನದ ಶಿಸ್ತುಗಳಿಂದ ಮತ್ತು ಔದ್ಯೋಗಿಕ ಕ್ಷೇತ್ರಗಳಿಂದ, ವಿವಿಧ ಪ್ರಾದೇಶಿಕತೆ ಮತ್ತು ಸಾಂಸ್ಕೃತಿಕ ವಿಶಿಷ್ಟತೆಗಳಿಂದ ಪ್ರವೇಶಿಸಿದ ಮಹಿಳೆಯರು ಕಾವ್ಯ ಮಾದರಿಗಳನ್ನು ರೂಪಿಸಿದರು.

ಕಳೆದ ಮೂರು ದಶಕಗಳ ಕನ್ನಡ ಮಹಿಳಾ ಕಾವ್ಯವನ್ನು ಅಧ್ಯಯನದ ಅಗತ್ಯಕ್ಕಾಗಿ ನಾಲ್ಕು ಕಾಲಕ್ರಮದ ಹಂತಗಳಾಗಿ ವಿಂಗಡಿಸಿಕೊಳ್ಳಬಹುದಾಗಿದೆ.

೧. ನೇರ ಪ್ರತಿಭಟನೆ
೨. ಶೋಷಿತ ಸ್ಥಿತಿಗಳ ಶೋಧ
೩. ಪ್ರತಿಮಾದರಿಗಳ ನಿರ್ಮಾಣ
೪. ಪರ್ಯಾಯ ನೆಲೆಯ ಹುಡುಕಾಟ.

ಇವು ಮಹಿಳಾ ಸಂವೇದನೆಯ ಆದ್ಯತೆಯ ನೆಲೆಗಳನ್ನು ಸ್ಪಷ್ಟಪಡಿಸುತ್ತದೆ ಮತ್ತು ಮಹಿಳಾ ಸಾಹಿತ್ಯ ಚರಿತ್ರೆಯ ಹಂತಗಳನ್ನು ದಾಖಲಿಸುತ್ತವೆ.

**೧. ನೇರ ಪ್ರತಿಭಟನೆ**

ಮಹಿಳಾ ಸಂವೇದನೆಗೆ ಪ್ರತಿಭಟನೆಯೆಂಬುದೇ ಹೊಸತು ಮತ್ತು ಬೆರಗಿನದ್ದು. ಸಾಂಸ್ಕೃತಿಕ ಸಂರಚನೆಯಲ್ಲದಕ್ಕೆ ಅವಕಾಶವೇ ಇಲ್ಲ. ಅವಳದೇನಿದ್ದರೂ ಅನುನಯದ ಧಾಟಿ ಮತ್ತು ಆನುಷಂಗಿಕ ಲಯ. ಪ್ರತಿಭಟನೆ ಎಂಬುದು ಅಸಂಸ್ಕೃತ ನಡವಳಿಕೆಯಾಗಿ ದಾಖಲಾಗುತ್ತಿತ್ತು. ಇಂತಹ ಸಾಮಾಜಿಕ ಸಾಂಸ್ಕೃತಿಕ ಚೌಕಟ್ಟನ್ನು ಭೇದಿಸಿ ಹೊಸ ಆಲೋಚನಾ ಕ್ರಮವನ್ನು ರೂಪಿಸಿಕೊಳ್ಳುವ ಹಂತದಲ್ಲಿ ನೇರ ಪ್ರತಿಭಟನೆ ಕಂಡುಬಂತು. 'ತಾನು ಶೋಷಿತಳು' ಎಂಬ ಅರಿವು ಶೋಷಕನ ಪಾತ್ರದಲ್ಲಿ ಕಂಡ ಪುರುಷನ ವಿರುದ್ಧದ ಪ್ರತಿಕ್ರಿಯೆಯಾಗಿ ಮೂಡಿತು. ಭೂತ ಮತ್ತು ವರ್ತಮಾನದ ಸತ್ಯಗಳು ಒಡ್ಡಿದ ಸವಾಲುಗಳಲ್ಲಿ ನಲುಗಿದ ಭಾವವಿದು. ದಲಿತ ಜನಾಂಗದ ಶತಮಾನಗಳ ಯಾತನೆ 'ಇಕ್ರಲಾ ಒದೀರ್ಲಾ.....' ಎಂದು ತೀಕ್ಷ್ಣವಾಗಿ ವ್ಯಕ್ತವಾದಂತೆ, ಮಹಿಳಾ ಜನಾಂಗದ ಪರಂಪರಾಗತ ತಪ್ತತೆ ಕೂಡ -

ಅಯ್ಯಾ ನನಗೊಂದು ಆಶೆ
ಹಾಗೆ ಹೀಗೆ ಹೆಣ್ಣ ಬುಗುರಿಯಾಡಿಸುವ
ಇವುಗಳ ಕುಂಡಿಗೆ ಝಾಡಿಸಿ ಒದೆಯಬೇಕು
ಒಮ್ಮೆಯಾದರೂ

*(ಚ. ಸರ್ವಮಂಗಳಾ - ಅಮ್ಮನಗುಡ್ಡ)*

ಎನ್ನುವಷ್ಟು ವಾಚ್ಯವಾಗಿಯೇ ವ್ಯಕ್ತವಾಯಿತು. ಇಂತಹ ವಾಚ್ಯತೆಯನ್ನು ರೂಪಿಸಿಕೊಳ್ಳುವುದು 'ಆರ್ಯನಾರೀ' ಮಿಥ್‌ನ ಮಹಿಳಾ ಸಂವೇದನೆಗೆ ಕಠಿಣವೇ ಆಗಿತ್ತು. ಇದುವರೆಗೂ ಪುರುಷ ದೃಷ್ಟಿಯಿಂದ ತಮ್ಮನ್ನು ಕಂಡ ಭ್ರಮೆ ಕಳಚಿಕೊಂಡು, ತನ್ನನ್ನು ತಾನು ನಿರ್ವಚಿಸಿಕೊಳ್ಳುವ ಬಗೆ ವ್ಯಕ್ತವಾಯಿತು. 'ನಾವು ಹುಡುಗಿಯರೇ ಹೀಗೆ' ಎಂಬ ಆತ್ಮಶೋಧದ ನಡೆಯಿದು. ಜುಮ್ಮೆನ್ನಿಸುವ ಭಾವನೆಗಳನ್ನೆಲ್ಲ ಡಬ್ಬಿಯೊಳಗೆ ಹಿಟ್ಟು ಒತ್ತಿಟ್ಟಂತೆ ಒತ್ತಿಒತ್ತಿ ಗಟ್ಟಿ ಮಾಡುವ ನಾವು ವ್ಯವಸ್ಥೆಯ ಚೌಕಾಬಂದಿಗೆ ನಮ್ಮನ್ನು ಒಗ್ಗಿಸಿಕೊಳ್ಳುತ್ತಿದ್ದೇವೆ ಎಂಬ ಹತಾಶೆ ಹಾಗೂ ಎಚ್ಚರ ಬೆಳಗಿನಂತೆ ತೆರೆದುಕೊಂಡಿತು. ಮಹಿಳಾ ಕಾವ್ಯದ ಮೊಟ್ಟಮೊದಲ ಹಂತದಲ್ಲಿ ಕಂಡುಬಂದ ಈ ಪ್ರತಿಭಟನಾತ್ಮಕ ಧ್ವನಿ - ಮಹಿಳಾ ಬದುಕಿನಲ್ಲಿ ಗೋಚರವಾದ ಪ್ರಜ್ಞೆಯ ದಾಖಲಾತಿಯೂ ಆಗಿದೆ.

**೨. ಶೋಷಿತ ಸ್ಥಿತಿಗಳ ಶೋಧ**

ಹೆಣ್ಣು ದಮನಿತಳು ಎಂಬ ಅರಿವು ಮೊದಲ ಹಂತವಾದರೆ, ದಮನಿತ ಸ್ಥಿತಿಯ ಕಾರಣಗಳ ಹುಡುಕಾಟ ಎರಡನೆಯ ಹಂತದ್ದಾಗಿದೆ. 'ಪುರುಷ ವಿರೋಧಿ' ಎಂಬ ಪ್ರಾಥಮಿಕ ತಿಳಿವಳಿಕೆ ಕಳೆದು, ಪುರುಷ ಹಿತಾಸಕ್ತ ಸಾಂಸ್ಕೃತಿಕ ಸಂರಚನೆಗಳು ಏಕಕಾಲದಲ್ಲಿ ಸ್ತ್ರೀ-ಪುರುಷ ರಿಬ್ಬರಿಗೂ ಅನ್ಯಾಯ ಮಾಡುತ್ತಿವೆ ಎಂಬ ತಾತ್ವಿಕತೆ ರೂಪುಗೊಳ್ಳ ತೊಡಗಿತು. ಮಗಳು, ಪತ್ನಿ, ತಾಯಿ ಮೊದಲಾದ ಸಾಂಪ್ರದಾಯಿಕ ಐಡೆಂಟಿಟಿಯಲ್ಲಿ ಹೆಣ್ಣಿಗೆ ಆತ್ಮಸಮ್ಮಾನವಾಗಲಿ, ಬದುಕಿನ ಹಕ್ಕಾಗಲಿ ದೊರೆಯುತ್ತಿಲ್ಲ ಎಂಬ ದಿಗಿಲಿನ ಸ್ಥಿತಿಯಿದು. ಆದರೆ ಈ ದಿಗಿಲು ಪುರುಷ ದ್ವೇಷವನ್ನು ಬೆಳೆಸಲಿಲ್ಲ. ಬದಲಾಗಿ ಪುರುಷನನ್ನು ಸಹವರ್ತಿ ಯನ್ನಾಗಿ ಸ್ವೀಕರಿಸುವ ಪ್ರಬುದ್ಧತೆಯನ್ನು ಒಳಗೊಂಡಿತು.

ಹುಟ್ಟೆಂಬುದು ಉರಿಕೊಳ್ಳಿ
ಬಾಲ್ಯವೊಂದು ಅಗ್ನಿಕುಂಡ
ಯೌವನವು ಕಾಳ್ಗಿಚ್ಚಾದ ನನಗೆ
ಬೆಳಕಿನ ಸುಖ ಗೊತ್ತಿಲ್ಲ ಸಖ

*(ಸುಕನ್ಯಾ ಮಾರುತಿ - ತಾಜಮಹಲಿನ ಪಾಡು)*

ಹೆಣ್ಣಾಗಿರುವ ಅಸುಖ ಮತ್ತು ಸಂಕಟವನ್ನು ಬಯಲಿಗಿಡಲಾಯಿತು. ಪರಂಪರಾಗತವಾದ ತಾಯಿ-ಮಾಯಿ-ಕ್ಷಮಯಾಧರಿತ್ರಿಗಳೊಳಗಿನ ಪೊಳ್ಳುತನವನ್ನು ಜೀವವಿರೋಧಿತನವನ್ನು ತಿರಸ್ಕರಿಸುವ ಅನಿವಾರ್ಯತೆ

*Edited, Printed, Published and owned by Rajeshwari H.S., No. 114/5, 9th Cross*
*2nd Main, Chamarajpet, Bangalore - 560 018.*
*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*
*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*

ಪೇಟೆ, ಬೆಂಗಳೂರು –
ಅಥವಾ
ು
ಹಾಗೂ
ರ್ಸಿ
ವಿಜಯನಗರ
17

ಅಭಿವ್ಯಕ್ತಗೊಂಡಿತು. ಹೆಣ್ಣೆಂಬ ಕಾರಣಕ್ಕಾಗಿ ಮೂಲಭೂತ ಹಕ್ಕಿನಿಂದ ವಂಚಿತವಾಗಬೇಕಾದ್ದನ್ನು ಮಹಿಳಾ ಸಂವೇದನೆ ತೀವ್ರವಾಗಿ ಗ್ರಹಿಸಿದೆ.

ಎಂದಿನಿಂದಲೊ ಸತಿ
ನಾ ಚಿತೆ
ಏರಿದವಳು (*ಮಾಲತಿ ಪಟ್ಟಣಶೆಟ್ಟಿ - ಹೂದಂಡಿ*)

ಹೆಣ್ಣು ಹುಟ್ಟುತ್ತಲೇ ಸತಿ. ಅವಳ ಬಾಲ್ಯ ಕೂಡ ಈ ಸತಿತ್ವದ ಗರಡಿಮನೆಯೇ ಆಗಿರುತ್ತದೆ. ಮದುವೆಯಾಗಿದ್ದರೂ ಆಗದಿದ್ದರೂ, ವಿಧವೆಯಾಗಿದ್ದರೂ ಬಾಲ್ಯ, ಯೌವನ, ವೃದ್ಧಾಪ್ಯಗಳೆಲ್ಲವೂ ಸತೀತ್ವದ ನೇಯ್ಗೆಯಲ್ಲಿಯೇ ಸೇರಿ ಹೋಗಿರುತ್ತದೆ. ಬೆಂಕಿಯಲ್ಲಿ ಬೆಂದರೂ ಬೇಯದಿದ್ದರೂ ಚಿತೆಯ ಕಾವಿನಿಂದ ಹೊರಬರುವುದು ಸಾಧ್ಯವಿಲ್ಲ. ವ್ಯವಸ್ಥೆ ಗರ್ಭೀಕರಿಸಿಕೊಂಡಿರುವ ಏಕಲಿಂಗೀ ಧೋರಣೆಯನ್ನು ಮರು ಮೌಲ್ಯಮಾಪನಕ್ಕೆ ಒಡ್ಡುವ ಅಗತ್ಯಕ್ಕಾಗಿ ಆ ಮೌಲ್ಯಗಳನ್ನು ತಿರಸ್ಕರಿಸುವ ಧೋರಣೆ ಕಂಡುಬಂದಿತು. 'ನಾವು ಪತಿವ್ರತೆಯರಲ್ಲ' ಎಂಬಂತಹ ಕವನಗಳು ಈ ದೃಷ್ಟಿಯಿಂದ ಚರಿತ್ರಾರ್ಹ. ಹೆಣ್ಣಿನ ಲೈಂಗಿಕತೆಯನ್ನು ಅಸ್ಪೃಶ್ಯ ಮತ್ತು ಅವಹೇಳನಕಾರಿ ಎಂದು ಬಿಂಬಿಸಿದ ಸಂಸ್ಕೃತಿ ಹೆಣ್ಣಿನ ಮಾನ-ಅಪಮಾನ; ಮೌಲ್ಯ-ಅಪಮೌಲ್ಯ; ಸೌಂದರ್ಯ-ಕುರೂಪಗಳನ್ನು ತನ್ನ ಹಿತಾಸಕ್ತಿಗನುಗುಣವಾಗಿ ನಿರ್ವಚಿಸಿಕೊಂಡಿದೆ. ಹೆಣ್ಣಿನ ಜೈವಿಕತೆಯನ್ನು ತಿರಸ್ಕರಿಸುವ-ಪುರಸ್ಕರಿಸುವ ಇಬ್ಬಂದಿತನವನ್ನೇ ಇಡಿಯಾಗಿ ನಿರಾಕರಿಸುವ ಕ್ರಮ ವ್ಯಕ್ತವಾಗಿದೆ. ಆದ್ದರಿಂದ ಪುರುಷ ಹಿತಾಸಕ್ತ ಧೋರಣೆಗಳನ್ನು ಅಲ್ಲಗಳೆಯಬೇಕಾದ ಒತ್ತಡವನ್ನು ಮಹಿಳಾ ಕಾವ್ಯದಲ್ಲಿ ಕಾಣುತ್ತೇವೆ.

ಅದೇ ವೀರ್ಯ ಅದೇ ಗರ್ಭಕ್ಕೆ ಹುಟ್ಟಿ
ಅದೇ ಮೊಲೆಯ ಚೀಪಿ ಬೆಳೆದಿದ್ದೇವೆ ಸ್ವಾಮಿ ನಾವೂ
(*ಅನಸೂಯಾದೇವಿ - ಪ್ರಕೃತಿ-ಪುರುಷ*)

ಕೇಳಿಬಂದಿತು. ಎಂಬ ಲಿಂಗಭೇದ ನೀತಿಯ ನಿರಾಕರಣದ ಹಕ್ಕೊತ್ತಾಯ ಕೇಳಿಬಂದಿತು. ಆಧುನಿಕ ಪ್ರಪಂಚಕ್ಕೆ ಆರೋಪಿತ ಮೌಲ್ಯಗಳಿಂದ ಕಳಚಿಕೊಳ್ಳದೆ, ತೆರೆದುಕೊಳ್ಳಲಾಗದ ಇಬ್ಬಂದಿತನ ವ್ಯಂಗ್ಯ ಮತ್ತು ವಿಷಾದದ ಭಾಷೆಯಲ್ಲಿ ವ್ಯಕ್ತವಾಯಿತು. ಮೌನ ಸಂಸ್ಕೃತಿಯನ್ನು ಕೊಡವಿಕೊಳ್ಳಬೇಕಾದ ಜರೂರು ಇದು. ತನ್ನ ಕಣ್ಣಲ್ಲಿ ಲೋಕ ನೋಡುವ ತಾಖತ್ತು ಹೊಸ ಹೆಮ್ಮೆಯನ್ನು ಮೂಡಿಸಿತು. ಪುರುಷ ಪ್ರಧಾನತೆಯ ಬಂಧನ ಮಹಿಳೆಯ ಆಲೋಚನಾ ವಿಧಾನವನ್ನು ಹಿಡಿತಕ್ಕೆ ತಂದುಕೊಂಡಿದ್ದರಿಂದ ಪ್ರೀತಿ-ಪ್ರೇಮ-ಪ್ರಣಯದಂತಹ ಸಂಗತಿಗಳು ಕೂಡ ಮುಕ್ತಗೊಳ್ಳಲಿಲ್ಲ. ಸಂವೇದನೆ-ಅಭಿವ್ಯಕ್ತಿಗಳಲ್ಲಿ ಪ್ರಾಮಾಣಿಕತೆಯನ್ನು ಸಾಧಿಸಿಕೊಳ್ಳಲಾಗದ ದುರಂತ ಮಹಿಳಾ ಕಾವ್ಯದಲ್ಲಿ ಮತ್ತೆ ಮತ್ತೆ ಎದುರಾಗಿದೆ.

ಎಂದೋ ಬರೆದು ಹರಿದೊಗೆದ ಗುಟ್ಟಿನ ಕವಿತೆ
ಇಂದು ನೆನಪಾಯಿತು, ಕಣ್ಣಂಚು ಒದ್ದೆಯಾಯಿತು.
(*ಶಶಿಕಲಾ ವೀರಯ್ಯಸ್ವಾಮಿ - ಮಧ್ಯಂತರದ ಒಂದು ಗದ್ಯ ಗೀತೆ*)

'ಆತ್ಮಚರಿತ್ರೆಯಲ್ಲೂ ಸೇರಲಾಗದ ನೆನಪುಗಳು' ಮಹಿಳಾ ಕಾವ್ಯವನ್ನು ಮತ್ತೆ ಮತ್ತೆ ಹಿಂದಿರುಗಿ ನೋಡ ಹಚ್ಚಿವೆ. ಹೆಣ್ಣಿನ ಅನಿಸಿಕೆ-ಆಲೋಚನೆ-ಸಂಕೋಚ-ತುಂಟತನ-ವಿಷಾದಗಳು ಅರೆಬರೆ ಯಾಗಿಯಾದರೂ ದಾಖಲಾಗುವ ಮೂಲಕ ಒಟ್ಟಾರೆ ಸಾಹಿತ್ಯ ಪರಂಪರೆ ಯಲ್ಲಿ ಹೊಸತನ ವ್ಯಕ್ತವಾಯಿತು.

(ಮುಂದುವರಿಯುವುದು)

## ಕಪ್ಪಾಗಿರೋರು ಸ್ವಲ್ಪ ಕೆಂ
## ಅವರ ಕಣ್ಣು ಕೆಂಪಾ

**ಸಾ**ಮಾನ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ
ಏನಾದರೂ ಕಾರ್ಯಕ್ರಮ ನಡೆದರೆ ಗ್ರಾಮದ
ಸೇರುತ್ತಾರೆ. ಹೀಗೆ ಸೇರಿದಾಗ ಮೇಲು ಜಾ
ಒಂದು ಕಡೆ ಕುಳಿತುಕೊಂಡ್ರೆ ಹರಿಜನ ಹೆಣ್ಣು
ಕಡೆ ಕುಳಿತುಕೊಳ್ಳುತ್ತಾರೆ. ಮೇಲು ಜಾತಿ
ಮುಂದೆ ಕುಳಿತುಕೊಂಡರೆ, ಹರಿಜನ
ಕುಳಿತುಕೊಳ್ಳುತ್ತಾರೆ. ಹೀಗೆ ಕುಳಿತುಕೊ
ಮುದುಡಿಕೊಂಡು ಒಬ್ಬರಿಗೊಬ್ಬರು ಒತ್ತಿ
ತ್ತಾರೆ. ನೀವು ಇಲ್ಲಿ ಕುಳಿತುಕೊಳ್ಳಿ, ಅ
ಯಾರೂ ಇವರಿಗೆ ಹೇಳುವುದಿಲ್ಲವಾದ
ಸಹಜವೆಂಬಂತೆ ಕಂಡರೂ ಸ್ವಲ್ಪ ಸೂಕ್ಷ
ಈ ವ್ಯತ್ಯಾಸ ಕಂಡುಬರುತ್ತದೆ. ಹಾಗೆ
ಸಹಜ ಸಂಬಂಧ ಇಲ್ಲವೆಂದು ಹೇ
ಒಳಗೊಳಗೆ ಕುದಿಯುತ್ತಾರೆ; ಕೆಲವೊ
ಜಾತಿಯ ಹೆಣ್ಣುಮಕ್ಕಳು ಒಳಗೊಳಗೆ
ಹೆಣ್ಣು ಮಕ್ಕಳಲ್ಲಿ ಸ್ವಾಭಿಮಾನದ
ಹೀಗೊಂದು ಸಭೆಯಲ್ಲಿ ನಡೆದ ಘ
ಸ್ವಾಭಿಮಾನಕ್ಕೆ ಹಿಡಿದ ಕನ್ನಡಿಯ

ಸಭೆ ಇನ್ನೂ ಪ್ರಾರಂಭವಾ
ಮಹಿಳೆಯರಿಗಾಗಿ ಕಾಯುತ್ತಿದ್ದ
ಕುರ್ಚಿಯನ್ನು ಹಾಕಿದ್ದರಿಂದ
ಕುಳಿತುಕೊಳ್ಳುತ್ತಿದ್ದರು. ಬಿಡುವಾ
ಬರ. ಒಬ್ಬಾಕೆ "ಬೆಳ್ಳಗಿರೋರು
ಬೆಲೆ. ಅದೇ ಕಪ್ಪಾಗಿರೋರು
ಕೆಂಪಾಗಾಗುತ್ತೆ" ಎಂದ
ಗ್ರಾಮದಲ್ಲಿನ ಮೇಲು ಜಾ
ತನ್ನ ಪಕ್ಕದಲ್ಲಿ ಕುಳಿತವ
ಹೊಟ್ಟೆಗಿದ್ರೆ ಬಟ್ಟೆಗಿರ್ತಿರಲಿಲ್ಲ
ಮನೆಯಲ್ಲಿ ಗೇಯ್ತಾ
ಈಗ ನಾವು ಯಾರೂ ಅ
ಅದ್ಕೆ ಅವಳಿಗೆ ನಮ್ಮ
ಗಂಗನ ಹೆಂಡ್ರನ್ನ
ಈಗ್ಲೂ ಹೊಲೆಯಾ
ಇರೋಕಾಯ್ತದಾ?
ಸಾಕೋಕೆ ಕಷ್ಟ ಹೊ
ಅವರ ಮನ್ಗೆ ಹೋಗಿ
ಕರೀಲಿ, ನಾನು ಮಾ
ತುಟಿಪಿಟಿಕ್ಕೆನ್ನದೆ ವ

'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

## ಸಹೃದಯ ಓದುಗರಲ್ಲಿ

**ಯಾ**ವುದೇ ಚಳವಳಿ ಸ್ವಾಯತ್ತತೆಯನ್ನು ಉಳಿಸಿಕೊಂಡಾಗ ಮಾತ್ರ ಶಕ್ತಿಯುತವಾಗಲು ಸಾಧ್ಯ. ಮಾನಸ ಸ್ವಾಯತ್ತ ಪರಿಕಲ್ಪನೆಯನ್ನು ತಾನಿಡುವ ಪುಟ್ಟ ಹೆಜ್ಜೆಯಲ್ಲೂ ಜಾರಿಗೆ ತರಲು ಪ್ರಯತ್ನಿಸಿದೆ. ಇದುವರೆಗೂ ಮಾನಸದ ಸಭೆಗೆ ರವೀಂದ್ರ ಕಲಾಕ್ಷೇತ್ರದ ಸಂಸ ಬಯಲು ರಂಗಮಂದಿರದ ಮೆಟ್ಟಿಲುಗಳು ಆಸರೆಯಾಗಿದ್ದವು. ಮಾನಸಕ್ಕೆ ತನ್ನದೇ ಆದ ಒಂದು ಕಛೇರಿ ಮಾಡಬೇಕೆಂಬ ಕನಸು ಈಗ ನನಸಾಗಿದೆ. ಈ ಕೆಳಗಿನ ವಿಳಾಸದಲ್ಲಿ ಮಾನಸಕ್ಕೆ ಒಂದು ಪುಟ್ಟ ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದೇವೆ. ಬಾಡಿಗೆ 1600/–. ಇದು ನಮಗೆ ಹೊರೆಯಾದರೂ, ಮಾನಸ ಸದಸ್ಯರಿಂದ ಸಂಗ್ರಹಿಸುತ್ತಿದ್ದೇವೆ. ಸಹೃದಯರು ಬಾಡಿಗೆ ಹಣವನ್ನು ಕೊಡುಗೆಯಾಗಿ ನೀಡುವುದರ ಮೂಲಕ ನಮ್ಮ ಈ ಪ್ರಯತ್ನಕ್ಕೆ ನೆರವು ನೀಡಬೇಕೆಂದು ಕೋರುತ್ತೇವೆ. ಕೊಡುಗೆ ನೀಡಿದವರ ಹೆಸರುಗಳನ್ನು ಮಾನಸದಲ್ಲಿ ಪ್ರಕಟಿಸಲಾಗುವುದು.

***ನೀವು ಮಾನಸಕ್ಕೆ ಹೀಗೆ ಸಹಕರಿಸಬಹುದು :***

- ಪತ್ರಿಕೆಗೆ ಚಂದಾದಾರರಾಗುವುದರ ಮೂಲಕ
- ಮಾನಸ ವೇದಿಕೆಗೆ ಸದಸ್ಯರಾಗುವುದರ ಮೂಲಕ
- ಕವನ, ಲೇಖನ, ವರದಿ, ಮುಂತಾದವುಗಳನ್ನು ಕಳಿಸಿಕೊಡುವುದರ ಮೂಲಕ
- **ಪತ್ರಿಕೆಯನ್ನು ಪ್ರಾಯೋಜಿಸುವುದರ ಮೂಲಕ**

*ಸಂಪಾದಕ ಮಂಡಳಿ*

*Posted on 9th of every month*
*at Chamarajpet Post Office*

Registered
Magazine

*ವಿಳಾಸ :*
**ನಮ್ಮ ಮಾನಸ**
34/1, 2ನೇ ಕ್ರಾಸ್, ಆಜಾದ್ ನಗರ, ಚಾಮರಾಜಪೇಟೆ,
ಬೆಂಗಳೂರು – 560 018